याथात्म्यज्ञानपूर्वकवर्णाश्रमधर्मेतिकर्तव्यताकपरमपुरुषचरणयुगलध्यानार्चनप्रणामादिः अत्यर्थप्रियः तत्प्राप्तिफलः अस्य जीवात्मनोऽनाद्यविद्यासंचितपुण्यपापरूप-कर्मप्रवाहहेतुकब्रह्मादिसुरनरतिर्यक्स्थावरात्मकचतुर्विधदेहप्रवेशकृततत्तदात्माभिमान-जनितावर्जनीयभवभयविध्वंसनाय, देहातिरिक्तात्मस्वरूप-------- ।

End:

यथोक्तं भगवता द्वैपायनेन मोक्षधर्मे, सर्वोपनिषद्व्याख्यानरूपम् -

न सन्दृशे तिष्ठति रूपमस्य न चक्षुषा पश्यति कश्चनैनम् ।
भक्त्या च धृत्या च समाहितात्मा ज्ञानस्वरूपं परिपश्यतीह ।।

धृत्या समाहितात्मा भक्त्या पुरुषोत्तमं पश्यति-साक्षात्करोति, प्राप्नोतीत्यर्थः । 'भक्त्या-त्वनन्यया शक्यः' इत्यनेनैकार्थ्यात् । भक्तिश्च ज्ञानविशेष एवेति सर्वं उपपन्नम् ।

सारासारविवेकज्ञाः गरीयांसो विमत्सराः ।
प्रमाणतन्त्रास्सन्तीति कृतो वेदार्थसंग्रहः ।।

Colophon:

इति श्रीमद्भगवद्रामानुजविरचितोऽयं वेदार्थसंग्रहः समाप्तः ।।

# ಯತಿರಾಜ ರಾಮಾನುಜ

## ಮೊದಲನೆ ಭಾಗ



ಬೆಂಗಳೂರು ಸಿಟಿ:

ಬೆಂಗಳೂರು ಪ್ರೆಸ್, ಮೈಸೂರು ರೋಡ್

1927

ಶ್ರೀ ಶ್ರೀ

# ಯತಿರಾಜ ರಾಮಾನುಜನಿಗೆ

---

"ಶ್ರೇಯಾನ್ ದ್ರವ್ಯಮಯಾದ್ಯಜ್ಞಾತ್ ಜ್ಞಾನಯಜ್ಞಃ ಪರಂತಪ।"

—ಗೀತೆ.

---

ಜಯಮ್ಮ.

# ಅವತಾರ ಸಮರ್ಥನೆ

---

ಮನ್ನಿಯೋಗಾದ್ಭೂತಪುರ್ಯಾ ಮಹೀನಾ ವಿಾಶ್ವರಃ ಕಲೌ।
ಶ್ರೀರಾಮಾನುಜರೂಪೇಣ ಜನಿಷ್ಯತಿ ಸತಾಂ ಮುದೇ।
ವಿಶಿಷ್ಟಾದ್ವೈತಸಿದ್ಧಾಂತಪ್ರತಿಪಾದನ ತತ್ಪರಃ।
ಭಾಷ್ಯಂ ನಿರ್ಮಾತಿ ವೇದಾಂತಸೂತ್ರಾಣಾಮತಿತತ್ತ್ವವಿತ್ ॥ —ಬ್ರಹ್ಮಾಂಡ ಪುರಾಣ.

ಮದಂಶೋ ಯೋ ಮಹಾವೀರ್ಯ ಶ್ಶೇಷಾಖ್ಯೋ ಧರಣೀಧರಃ।
ಜಗತಾಮುಪಕಾರಾಯ ತವ ವಂಶೇ ಭವಿಷ್ಯತಿ ॥ —ಭೂತಪುರೀ ಮಾಹಾತ್ಮ್ಯೆ.

ಅನಂತಃ ಪ್ರಥಮೋದೇವಃ ದ್ವಿತೀಯೋ ಲಕ್ಷ್ಮಣಸ್ತಥಾ।
ತೃತೀಯೋ ಬಲಭದ್ರಸ್ತು ಕಲೌ ಕಶ್ಚಿದ್ಭವಿಷ್ಯತಿ ॥ —ಭಾರ್ಗವ ಪುರಾಣ.

ಅಸ್ತಿತೇ ವಿಮಲಾಭಕ್ತಿರ್ಮಯಿ ಯಾದವನಂದನ।
ಪ್ರಥಮಂ ಶೇಷರೂಪೇಣ ಕೈಂಕರ್ಯ ಮಕರೋದ್ಭವಾನ್ ॥
ತತಸ್ತು ಲಕ್ಷ್ಮಣೋ ಭೂತ್ವಾ ಮಾಮಾರಾಧಿತವಾನಿಹ।
ಇದಾನೀಮಪಿ ಮಾಂ ಯಷ್ಟುಂ ಬಲಭದ್ರ ತ್ವಮರ್ಹಸಿ ॥
ಕಲಾವಪಿ ಯುಗೆ ಭೂಯಃ ಕಶ್ಚಿದ್ಭೂತ್ವಾ ದ್ವಿಜೋತ್ತಮಃ।
ನಾನಾವಿಧೈರ್ಭೋಗಜಾಲೈ ರರ್ಚನಂ ಮೇ ಕರಿಷ್ಯಸಿ ॥
—ಯಾದವಗಿರಿ ಮಾಹಾತ್ಮ್ಯೆ; ಪಾಂಚರಾತ್ರ ಸಂಹಿತೆ.

ಕಲೌ ಖಲು ಭವಿಷ್ಯಂತಿ ನಾರಾಯಣಪರಾಯಣಾಃ।
ಕ್ವಚಿತ್ಕ್ವಚಿನ್ಮಹಾಭಾಗಾಃ ದ್ರವಿಡೇಷು ಚ ಭೂರಿಶಃ ॥ —ಭಾಗವತ, ೧೧ ಸ್ಕಂಧ.

ಅಗಸ್ತ್ಯ ತೇ ಭದ್ರಮಸ್ತು ತಪೋಮಾ ಮತ್ಸರೋಭವ।
ತ್ವದ್ವೇದವಿದ್ಯಾ ಮದ್ಭಕ್ತೈಃ ಪಾಲಿತಾಸ್ಯಾ ತ್ಪುನಃಪುನಃ ॥
ಅನಂತಗರುಡಾದೀನಾಂ ಸೂರಿಣಾಂ ನಿತ್ಯಯೋಗಿನಾಂ।
ಅಂಶೋದ್ಭೂತಾ ಮಹಾಭಾಗಾ ಜಾಯಂತೀಹ ಮದಾಜ್ಞಯಾ॥—ಬ್ರಹ್ಮವೈವರ್ತ ಪುರಾಣ.

ಬ್ರಹ್ಮನ್ ಕಲಿಯುಗೇ ಪ್ರಾಪ್ತೇ ಧರ್ಮೇನಷ್ಟೇ ಶ್ರುತೀರಿತೇ।
ಮದ್ಭಕ್ತ ಸ್ಸರ್ವಧರ್ಮಜ್ಞ ಸ್ತ್ವಗೋತ್ರ ಸಮುದ್ಭವಃ ॥
ಶಾರೀರಕ ಮಹಾಭಾಷ್ಯ ಗ್ರಂಥಕರ್ತಾ ಜಿತೇಂದ್ರಿಯಃ।
ತಸ್ಯ ಸಂಬಂಧಿನಶ್ಶಿಷ್ಯಾ ಸ್ಸುರಾಣಾಮಪಿ ದುರ್ಲಭಂ ॥
ಮಾಮಪ್ರಾಪ್ಯೈವ ತೇ ಸರ್ವೇ ಗಮಿಷ್ಯಂತಿ ಪರಾಂ ಗತಿಂ ॥ —ಹಾರೀತ ಸ್ಮೃತಿ.

# ಯತಿರಾಜ ರಾಮಾನುಜ



ಶ್ರೀವೈಷ್ಣವ ಧರ್ಮಕ್ಕೆ ಗುರು ಗ್ರಹವು ಅನುಕೂಲ ಸ್ಥಾನದಲ್ಲಿದ್ದ ಕಾಲ. ಶ್ರೀರಂಗವಲ್ಲಿ ನಾಥಮುನಿ ಯಾಮುನಾಚಾರ್ಯ ಪ್ರಭೃತಿಗಳ ನೇತೃತ್ವದಲ್ಲಿ ಶ್ರೀವೈಷ್ಣವ ಮಂಡಲಿಯು ಕೀರ್ತಿ ಹೆಚ್ಚಳದಿಂದ ನಿಚ್ಚಳವಾಗಿ ಬೆಳಗುತ್ತಿತ್ತು. ಬರಿಯ ತರ್ಕಟತನಕ್ಕೆ ಮನಸೋತು ಮಿಥ್ಯಾವಾದಿಗಳಷ್ಟೇ ಅಲ್ಲದೆ ಮಿಥ್ಯಾಚಾರಿಗಳೂ ಆಗಿದ್ದ ಅವಿಚಾರೀ ವಿಚಾರವಂತರ ಒಣಗಿದ ಹೃದಯದಲ್ಲಿ ಭಕ್ತಿರಸಾಮೃತದ ಹೊಳೆ ಹರಿಯಲು ಮೊದಲಾಗುತ್ತಿದ್ದ ಕಾಲ. ಸತ್ಯ, ಮಿಥ್ಯ, ಬ್ರಹ್ಮ—ಏನೇನೋ ಕೇವಲ ಶಬ್ದಮಯ ವೇದಾಂತದ ವಾದಗಳ ಕಟುಧ್ವನಿಯಡಗಿ ಭಾಗವತ ಧರ್ಮದ ಭಕ್ತಿಯ ಮೃದು ಮಧುರ ದಿವ್ಯ ಗಾನವು ರಸವಂತ ಹೃದಯದಲಿ ಉಕ್ಕಿ ತುಳುಕಿ ಚೆಲ್ಲಾಡಿ ಹರಿಯುತಿದ್ದ ಕಾಲ. ಆಳ್ವಾರರು ಆಚಾರ್ಯರು—ಎಲ್ಲಾ ಒಂದೇ ದಿವ್ಯ ಗಾನದ ಪ್ರವಾಹ.

ತರ್ಕ ತರ್ಕವೆಂದು ಕುಣಿದು ಜನರು ಬೇಸತ್ತು ಭಕ್ತಿಯ ಹಾದಿ ಕಂಡು ಕುಣಿಯಲು ಮೊದಲಿಟ್ಟರು. ಯಾಮುನಾಚಾರ್ಯರು ತಾರ್ಕಿಕರಲಿ ತಾರ್ಕಿಕರಂತೆಯೂ ಭಕ್ತರಲಿ ಭಕ್ತರಂತೆಯೂ ಹೊಳೆದು ಶ್ರೀವೈಷ್ಣವ ಧರ್ಮದ ಕೀರ್ತಿಸ್ತಂಭವಾಗಿದ್ದರು. ಭಕ್ತರ ಅರಸರಾದ ಯಾಮುನಾಚಾರ್ಯ. ಅವರ ಹೆಸರೇ 'ಆಳವಂದಾರ್'—ಆಳಬಂದವರು, ಭಕ್ತರನಾಳಬಂದವರು.

ಅಂಥ ಸಮಯದಲ್ಲೇ ಶ್ರೀಮದ್ರಾಮಾನುಜಾಚಾರ್ಯರು ಹುಟ್ಟಿದುದು. ಅವರ ತಾಯಿ ಕಾಂತಿಮತಿ. ಅನೇಕ ಯಾಗಗಳ ಮಾಡಿ ಯಾಜ್ಞಿಕನೆನಿಸಿದ ಆಸೂರು ಕೇಶವಸೋಮಯಾಜಿ ತಂದೆ. ಹುಟ್ಟಿದೂರು ಶ್ರೀ ಪೆರಂಬೂದೂರು* ಅಥವಾ ಭೂತಪುರಿ. ಶಾಲಿವಾಹನ

* ಶ್ರೀ ಪೆರುಂಬೂದೂರು—ಮದರಾಸು ರೈಲಿನ ತಿರುವಳ್ಳೂರು ಸ್ಟೇಷನ್ನಿಗೆ ಹತ್ತು ಮೈಲು ದೂರದಲ್ಲಿದೆ.

ಶಕೆಯ ೯೩೯ನೆ ಪಿಂಗಳನಾಮ ಸಂವತ್ಸರದ ಚೈತ್ರ ಶುದ್ಧ ಪಂಚಮಿ ಗುರುವಾರ ಆರ್ದ್ರಾ ನಕ್ಷತ್ರದಲ್ಲಿ ಹುಟ್ಟಿದುದು. ಕ್ರಿಸ್ತ ಶಕೆ ೧೦೧೭. ಹೀಗೊಂದು ಶ್ಲೋಕದಲ್ಲಿ ಅವರ ಜನ್ಮ ಮುಹೂರ್ತವು ಹೇಳಿದೆ:—

ಕಲ್ಯಬ್ದೇ ದಿವ್ಯ ಕುಂಭೇ ಬುಧಜನವಿದಿತೇ ವತ್ಸರೇ ಪಿಂಗಳಾಖ್ಯೇ ।
ಚೈತ್ರಮಾಸೇ ಗತೇಷು ದ್ವಿಯುತ ದಶದಿನೇಷ್ವೇಧಮಾನೌ ಹಿಮಾಂಶೌ ॥
ಪಂಚಮ್ಯಾರ್ದ್ರಾ ಸಮೇತೇ ಸುರಗುರುದಿವಸೇ ಕರ್ಕಟಾಖ್ಯೇಂಚ ಲಗ್ನೇ ।
ಶ್ರೀಮದ್ರಾಮಾನುಜಾರ್ಯ ಸ್ಸಮಜನಿ ನಿಗಮಾಂತಾರ್ಥ ಸಂರಕ್ಷಣಾರ್ಥಂ ॥

ಎಲ್ಲರಿಗೂ ಆನಂದ ಹುಡುಗನ ನೋಡಿ. ಶ್ರೀವೈಷ್ಣವ ಧರ್ಮವ ಬೆಳಗಿಸುವ ಬೆಳಕಿಗೆಯೊಂದ ಭಗವಂತ ನೀಡಿದನೆಂದು ಎಲ್ಲರಿಗೂ ಹರುಷ. ಹಾರೀತ ಋಷಿಗೆ ಹಿಂದೆ ದೇವರು ಕೊಟ್ಟ ವರ ಫಲಿಸಿತೆಂದು ಯಾಮುನಾಚಾರ್ಯರಿಗೆ ಬಲು ಸಂತೋಷ.

ಮದಂಶೋ ಯೋ ಮಹಾವೀರ್ಯ ಶ್ಶೇಷಾಖ್ಯೋ ಧರಣೀಧರಃ ।
ಜಗತಾ ಮುಪಕಾರಾಯ ತವ ವಂಶೇ ಭವಿಷ್ಯತಿ ॥

—ಭೂತಪುರೀ ಮಾಹಾತ್ಮ್ಯ, III, ೧೦೪—೫.

ಎಂದು ಹಾರೀತ ಋಷಿಗೆ ಭಗವಂತ ವರವ ನೀಡಿದ್ದನಂತೆ!

ಯಥಾ ವಿಧಿಯಾಗಿ ಅನ್ನಪ್ರಾಶನ, ಚೌಲ, ಮೌಂಜೀ ಬಂಧನ, ಉಪನಯನಗಳ ಯಥಾ ಕಾಲದಲ್ಲಿ ಮಾಡಿ ಕೇಶವಸೋಮಯಾಜಿ ಮಗನಿಗೆ ಎಲ್ಲ ವೇದಗಳನು ತಾನೇ ಹೇಳಿಕೊಟ್ಟ. ಶಾಸ್ತ್ರಗಳೂ ಓದಿಯಾಯಿತು. ಹದಿನಾರನೆ ವಯಸಿನೊಳಗೆ ಮದುವೆಯನೂ ಮಾಡಿದರು.

ಬ್ರಹ್ಮಚರ್ಯಾಶ್ರಮ ಮುಗಿದರೂ ಆಚಾರ್ಯರ ವಿದ್ಯಾರ್ಥಿ ದಶೆ ಮುಗಿಯಲಿಲ್ಲ. ಇನ್ನೂ ಹೆಚ್ಚಾಗಿ ಕಲಿಯಬೇಕೆಂದು ಕಾಂಚೀಪುರಕೆ ಹೋದರು. ಅಲ್ಲಿ ಯಾದವಪ್ರಕಾಶನೆಂಬ ಪಂಡಿತರಾಜನ ಬಳಿ ಶುಶ್ರೂಷೆಗೆ ನಿಂತರು. ಆಚಾರ್ಯರ ಚಿಕ್ಕಮ್ಮನ ಮಗ ಗೋವಿಂದ ಮಿಶ್ರನೂ ಅಣ್ಣನ ಜೊತೆಯೊಳಗೆ ಓದಲು ಬಂದ. ಇಬ್ಬರೂ ಕೂಡಿ ಅಧ್ಯಯನ ನಡೆಸಿದ್ದರು.

೨

ಆಚಾರ್ಯರ ಕಾಲದ ವಿದ್ಯಾಭ್ಯಾಸವು ಈಗಣ ಕಾಲದಂತೆ ಬೇಕು ಬೇಡಾದ ಕಾಟವಾಗಿರಲಿಲ್ಲ. ಆ ಗುರುಕುಲವಾಸದ ವಿದ್ಯೆಯ ಸೊಬಗೇ ಬೇರೆ, ಗುರುಗಳೇ ಬೇರೆ, ಶಿಕ್ಷಣ ಕ್ರಮವೇ ಬೇರೆ, ವಿದ್ಯೆಯೇ ಬೇರೆ. ಈ 'ಅಕ್ಕಿ ಬೇಳೆಯ ವಿದ್ಯೆ' ಕಲಿತದ್ದ ಕಾರಿಬಿಡುವುದು ಮಾತ್ರವೇ ಬಲ್ಲ ಯಂತ್ರಗಳು, ಆಚಾರ ರಂಗದಲ್ಲಿಳಿಯದ ಬರೀ ವಿಚಾರ; 'ವಚನದಲಿ ಶುಚಿ ವೀರ ಸಾಧುತ್ವ'—ಇವು ಯಾವುದೂ ಆಗ ಇರಲಿಲ್ಲ. ತನುಮನ ಧನಗಳನ್ನು ಗುರುವಿಗರ್ಪಿಸಿ ಗುರುವಿನ ಗುಲಾಮನಾಗಬೇಕಾದ ಅಗತ್ಯ ಈಗಿಲ್ಲ. ಈಗ ವಿದ್ಯೆ ಸುಲಭ ಲಭ್ಯ. ಆಗ ಹಾಗಿರಲಿಲ್ಲ. ಗುರುವಿನ ಗುಲಾಮನಾಗದೆ ಏನೂ ಇಲ್ಲ. ಆಚಾರ್ಯಾನುಗ್ರಹವಾಗದೆ ಯಾವುದೂ ಇಲ್ಲ. ಯಾಕೆ? ವಿದ್ಯೆಯೆಂದರೆ ಭವಾರ್ಣವ ಸೇತುವೆಂದೇ ಅವರ ಅಭಿಪ್ರಾಯವಿತ್ತು. ಮುಕುತಿಯೇ ಅವರ ವಿದ್ಯೆಯ ಫಲ. ಆದುದ ರಿಂದಲೇ ಗುರುವಿನ ಗುಲಾಮನಾಗಬೇಕಾದ ಅಗತ್ಯ. ಈಗ ಮುಕು ತಿಯೂ ಬೇಡ. ಆಚಾರ್ಯಾನುಗ್ರಹವೂ ಬೇಡ. ವಿದ್ಯೆಯೊಂದು ಬಂದರೆ ಸಾಕಂತೆ.

ಗುರು ಸೇವೆಯೇ ಗುರುಕುಲವಾಸದ ಮಾಧುರ್ಯ. ಗುರು ಸೇವೆಯಿಲ್ಲದ ಗುರುಕುಲವಾಸ ಕೆಚ್ಚಲಲಿರುವ ಉಣ್ಣೆಯಂತೆ. ದೇಹ ವನು ಗುರುವಿಗಧೀನಮಾಡಿ ಗಳಿಗೆ ಗಳಿಗೆಯೂ ಗುರು ಸನ್ನಿಧಿಯಲಿ ಗುಲಾಮನಂತೆ ಎಲ್ಲ ಕೆಲಸವನೂ ಮಾಡುತ್ತ ಆನಂದ ದೇವಾಲಯ ದೊಳಗಿನ ದೇವತೆಯನಾರಾಧಿಸುವುದರ ಮಧುರತೆಯನು ನಾವು ಬಲ್ಲೆವೇನು ಭುಭುಕ್ಷುಗಳು? ಮುಮುಕ್ಷುಗಳ ಸೊತ್ತು ಆ ಸಂತೋಷ.

ಆಚಾರ್ಯರೂ ಯಾದವಪ್ರಕಾಶನ ಬಳಿ ಹಾಗೆ ಗುಲಾಮಗಿರಿ ಮಾಡುತಿದ್ದರು. ಶಿಷ್ಯನ ಸೇವೆಯಿಂದ ಸಂಪ್ರೀತನಾಗಿ ಯಾದವನೂ ಅಕ್ಕರೆಯಿಂದ ವೇದಾಂತ ಶಾಸ್ತ್ರದ ತೊಡಕುಗಳನು ಬಿಡಿಸಿ ಸುಲಿದ ಬಾಳೆಯ ಹಣ್ಣಿನಂತೆ ಅಧ್ಯಾಪನೆ ಮಾಡುತಿದ್ದ. ಒಂದು ದಿನ ಗುರು

ಗಳಿಗೆ ಎಣ್ಣೆಯೊತ್ತುವುದು ಆಚಾರ್ಯರ ಪಾಲಿಗೆ ಬಂತು. ಎಣ್ಣೆಯೊತ್ತಿಸಿ ಕೊಳುತ ಛಾಂದೋಗ್ಯೋಪನಿಷತ್ತನು ಗುರುಗಳು ವಿವರಿಸಿ ಹೇಳು ತಿದ್ದರು. ಆಚಾರ್ಯರು ಶ್ರದ್ಧೆಯಿಂದ ಕೇಳುತಿದ್ದರು.

'ತಸ್ಯ ಯಥಾ ಕಪ್ಯಾಸಂ ಪುಂಡರೀಕಮೇವಮಕ್ಷಿಣೀ '*–(ಛಾಂ. ೧, ೬, ೭.) ಎಂಬ ವಾಕ್ಯದ ಪ್ರಸ್ತಾಪ ಬಂತು. ಭಗವಂತನ ಕಣ್ಣು ಕೋತಿಯ ಪಿರ್ರೆಯಂತೆ ಕೆಂಪಗಿದೆ ಎಂದು ಯಾದವನು ಅರ್ಥ ಮಾಡಿದ. ಭಗವದ್ವಿಷಯಕವಾದ ಉಪನಿಷದ್ವಾಕ್ಯಕೆ ಇಂಥ ಅಶ್ಲೀಲ ಅಪಾರ್ಥವನು ಗುರುಮುಖದಿಂದ ಕೇಳಿ ಆಚಾರ್ಯರಿಗೆ ಎದೆಯೊಳಗೆ ಮೊನೆಯಾದ ಬಾಣ ನೆಟ್ಟಂತಾಯ್ತು. ಹಿಡಿಸಲಾರದ ದುಃಖ ಬಂತು. ದುಃಖವನು ತಡೆಯಲಾರದೆ ಸದ್ದಿಲ್ಲದೆ ಆಚಾರ್ಯರು ಅತ್ತುಬಿಟ್ಟರು. ಬಾಗಿ ನಿಂತು ಎಣ್ಣೆಯೊತ್ತುತಿದ್ದ ಶಿಷ್ಯನ ಕಣ್ಣೀರು ಗುರುವಿನ ತೊಡೆಯ ಮೇಲೆ ಬಿದ್ದು ಬೆಚ್ಚಗೆ ಆಯಿತು. ಯಾದವನು ಬೆಚ್ಚಿ ಬಿದ್ದು ತಲೆಯೆತ್ತಿ ನೋಡಿದ. ಆಚಾರ್ಯರು ಅಳುವುದನು ನೋಡಿ 'ಅಳಲೇಕೆ' ಎಂದು ಪ್ರೇಮದಿಂದ ಕೇಳಿದ. 'ಭಗವನ್! ಉಪನಿಷ ದ್ವಾಕ್ಯಕೆ ಇಂಥ ಅರ್ಥ ಕೇಳಬೇಕಾಯಿತೆಂದು ಹೃದಯಕೆ ನೋವಾಯಿ ತಷ್ಟೇ. ಮತ್ತೇನೂ ಇಲ್ಲ' ಎಂದು ಅಂಜುತಂಜುತ ಆಚಾರ್ಯರಂದರು. ಗುರು ವಾಕ್ಯವೇ ಪ್ರಮಾಣವಾಗಿದ್ದ ಕಾಲ. ತಟ್ಟನೆ ಯಾದವನಿಗೆ ಸಿಟ್ಟು ಬಂತು. 'ನಾನು ಹೇಳಿದುದು ಅಪಾರ್ಥವಾದರೆ ನೀನು ಹೇಳು ಸರಿಯಾ ದರ್ಥ. ನೋಡೋಣ' ಎಂದು ಗದರಿಸಿದ.

ಅತ್ಯಂತ ವಿನಯದಿಂದ ಆಚಾರ್ಯರು ಕೈಜೋಡಿಸಿ ಹೇಳಿದರು. 'ಭಗವನ್! ಕಂ ಎಂದರೆ ನೀರು. ಪಿಬತಿ ಎಂದರೆ ಕುಡಿಯುವವ. ಹೀಗಾಗಿ ಕಪಿ ಎಂದರೆ ಸೂರ್ಯನೆಂದರ್ಥವಾಗುವುದು. ಆಸ ಶಬ್ದಕೆ ವಿಕಸನವೆಂದು ಅರ್ಥ. ಪುಂಡರೀಕವೆಂದರೆ ಕಮಲವಷ್ಟೆ. ಆದುದ ರಿಂದ ಸೂರ್ಯಮಂಡಲ ಮಧ್ಯಸ್ಥ ಭಗವಂತನು ಸೂರ್ಯ ಕಿರಣ

---

* ಗಂಭೀರಾಂಭಸ್ಸಮುದ್ಭೂತ ಸುಮೃಷ್ಟನಾಳ ರವಿಕರ ವಿಕಸಿತ ಪುಂಡರೀಕ ದಳಾಮಲಾಯತೇಕ್ಷಣ.

ವಿಕಸಿತ ಕಮಲದಂತಿರುವ ನೇತ್ರಗಳುಳ್ಳವನೆಂದಾಗುತ್ತದೆ ಅರ್ಥ. ಕಲ್ಯಾಣಮಯನಾದ ಭಗವಾನನಿಗೆ ಆಕಾರವಿಲ್ಲೆಂಬುದೇ ನಾಸ್ತಿಕತೆಯ ಗುರುತು. ಹೀಗಿರಲು ಭಕ್ತಿ ಭಾವದಿಂದ ವೇದ ವೇದಾಂಗಗಳನರ್ಥ ಮಾಡದೆ ಅಶ್ಲೀಲಾರ್ಥ ಮಾಡುವುದನೇನೆನಬೇಕು? ನಾಸ್ತಿಕತೆಗೆ ಇನ್ನೇನು ಬೇಕು.' 'ನಿನಗೆ ನನ್ನೊಡನೆ ವಾದ ಮಾಡುವಷ್ಟು ಗರ್ವವೇ' ಎಂದು ಗುರುಗಳು ಗದರಿಸಿಬಿಟ್ಟರು.

ಮತ್ತೊಂದು ದಿನ ತೈತ್ತಿರೀಯೋಪನಿಷತ್ತಿನ ಪ್ರವಚನ ನಡೆದಿತ್ತು. ಸತ್ಯಂ ಜ್ಞಾನಮನಂತಂ ಬ್ರಹ್ಮ—(ತೈ. ೨, ೧, ೧.) ಎಂಬ ವಾಕ್ಯ. ಬ್ರಹ್ಮನು ಸತ್ಯವೂ ಜ್ಞಾನವೂ ಅನಂತವೂ ಆಗಿದ್ದಾನೆ ಎಂಬುದೇ ಅದರ ಅಭಿಪ್ರಾಯ. ಯಾದವನು ತದ್ವಿಪರೀತವಾಗಿ ಬ್ರಹ್ಮ ನಿರ್ಗುಣತ್ವವನು ಹೇಳುತ 'ಕೊಂಬಿಲ್ಲದುದು, ಕೊಂಬು ಮುರಿದುದು, ಕೊಂಬು ಸರಿಯಾಗಿರುವುದು ಎಂದು ಒಂದೇ ಆಕಳನ್ನು ಹೇಗೆ ಅನ್ನಲಾಗದೋ ಹಾಗೆ ಸತ್ಯ, ಅನಂತ, ಜ್ಞಾನಗಳು ಒಬ್ಬನೇ ಬ್ರಹ್ಮನಲ್ಲಿ ಏಕತ್ರಿತವಾಗಿ ಇರಲಾರವು. ಬ್ರಹ್ಮನು ಏಕಕಾಲದಲಿ ಅನೇಕ ಗುಣಯುಕ್ತನಾಗಿರುವುದು ಅಶಕ್ಯ. ಬ್ರಹ್ಮನು ಸಗುಣನೇ ಅಲ್ಲ, ನಿರ್ಗುಣ' ಎಂದು ವ್ಯಾಖ್ಯಾನ ಮಾಡಿದ. ಆಚಾರ್ಯರ ಭಕ್ತಿವಂತ ಮೃದು ಹೃದಯಕ್ಕೆ ಈ ತಾರ್ಕಿಕ ಕಾಠಿನ್ಯ ವೃತ್ತಿಯು ಪರಮಾವಧಿಯು ನೋವುಂಟುಮಾಡಿತು. ಇದು ಸಮಂಜಸವಲ್ಲೆಂದು ಆಚಾರ್ಯರು ವಿರೋಧಿಸಿದರು. ಹಾಗಾದರೆ ನಿನ್ನ ಅರ್ಥವೇನೆಂದು ಕೇಳಲು ತಮ್ಮ ಅಭಿಪ್ರಾಯವನು ಗುರು ಸನ್ನಿಧಿಯಲಿ ನಮ್ರತೆಯಿಂದ ನಿವೇದಿಸಿದರು.

'ವಾಕ್ಯಕ್ಕೆ ಅದರ ಉದ್ದೇಶವನನುಸರಿಸಿ ಇದ್ದಹಾಗೆ ಅರ್ಥ ಮಾಡಬೇಕಲ್ಲದೆ ಹಿಗ್ಗಾಮುಗ್ಗಾ ಎಳೆದು ನಮ್ಮ ಮನಸಿಗೆ ಬಂದ ಅರ್ಥಕ್ಕೆ ಹೊಂದಿಸಬಾರದು. ಬ್ರಹ್ಮನು ಸತ್ಯ, ಬ್ರಹ್ಮನು ಜ್ಞಾನ, ಬ್ರಹ್ಮನು ಅನಂತ ಎಂಬುದೇ ಆ ವಾಕ್ಯದ ಅರ್ಥವೆಂದು ಆ ವಾಕ್ಯವನು ಕೇಳಿದ ಯಾರಿಗಾದರೂ ಅರ್ಥವಾಗುವಂತಿದೆ. ಬ್ರಹ್ಮನು ಸತ್ಯನಲ್ಲ, ಜ್ಞಾನವಲ್ಲ, ಅನಂತನಲ್ಲ ಎಂದು ನಿಷೇಧ ಮಾಡುವ ಭಾವದ ಶಬ್ದವಾಗಲಿ ಉದ್ದೇಶ

ವಾಗಲಿ ಅಲ್ಲಿಲ್ಲವೇ ಇಲ್ಲ. ಬ್ರಹ್ಮನಿರುವುದೇ ಆದರೆ ಸಗುಣನಿರಬೇಕು. ನಿರ್ಗುಣನಾದ ಅಡಿಬಿಡಂಗಿ ಬ್ರಹ್ಮನ ಸತ್ಯತೆಗೇ ಲೋಪವಿದೆ. ಯಾವುದೇ ಆಗಲಿ ಅಂಥಾದ್ದೊ ಇಂಥದ್ದೋ, ಎಂಥದ್ದೋ ಆದೀತಲ್ಲದೆ ಎಂಥದ್ದೂ ಅಲ್ಲವೆಂದರೆ ಅದು ಇರುವುದೇ ಸಂದೇಹವಲ್ಲವೆ? ಇನ್ನು ಸತ್ಯ ಜ್ಞಾನ ಅನಂತ ಗುಣಗಳು ಏಕತ್ರಿತವಾಗಿ ಏಕಕಾಲದಲ್ಲಿ ಒಂದೇ ಕಡೆ ಇರಲಾರ ದಂಥ ಪರಸ್ಪರ ವಿರುದ್ಧ ಗುಣಗಳಲ್ಲ ಬೆಳಕು ಕತ್ತಲೆಗಳ ಸಮಾವೇಶದಂತೆ. ಇವು ಪರಸ್ಪರ ಪೂರಕಗಳು, ಪೋಷಕಗಳು. ಸತ್ಯ ಶಬ್ದವು ಬ್ರಹ್ಮನ ನಿತ್ಯತೆ ಯನು ಸ್ಥಾಪಿಸಿ ಅಶಾಶ್ವತದಿಂದ ಬೇರೆಯಾದ ಶಾಶ್ವತ ವಸ್ತುವೆಂದು ತಿಳಿಸುತ್ತಿದೆ. ಜ್ಞಾನ ಶಬ್ದವು ಬ್ರಹ್ಮ ಆತ್ಮನೆಂಬುದರ ಸೂಚನೆ. ಜ್ಞಾನವು ಬ್ರಹ್ಮನ ಅವಿಯೋಜ್ಯ ಗುಣ. ಹಾಗಲ್ಲದಿದ್ದರೆ ಬ್ರಹ್ಮ ಆತ್ಮನೆಂಬುದಕ್ಕೆ ಆಧಾರ ಸಾಲದೆ ಜಡ ಪ್ರಕೃತಿಯೇ ಬ್ರಹ್ಮನೆನಬೇಕಾದೀತು. ಅನಂತ ಶಬ್ದವು ಬ್ರಹ್ಮನ ವ್ಯಾಪಕತೆ, ರೂಪಗಳ ಅನಂತತೆಯನು ಸ್ಥಾಪಿಸುತಿದೆ. ಹೀಗೆ ಸತ್ಯಂ ಜ್ಞಾನಮನಂತಂ ಬ್ರಹ್ಮ—ಎಂಬುದು ಬ್ರಹ್ಮನು ನಿತ್ಯ, ಶಾಶ್ವತ; ಅಪ್ರಾಕೃತಿಕ, ಆತ್ಮ; ಅನಂತ ರೂಪಿ, ಅನಂತ ವ್ಯಾಪಿ ಎಂದು ಅರ್ಥವಾಗುತ್ತದೆ. ಈ ಗುಣಗಳೆಲ್ಲ ಪರಸ್ಪರ ವಿರೋಧವಿಲ್ಲದೆ ಕೆಂಪು, ವಾಸನೆ, ಮಿದುವು ಇವೆಲ್ಲ ವಿರೋಧವಿಲ್ಲದೆ ಪರಸ್ಪರ ಪೂರಕಗಳಾಗಿ ಹೂವಿನಲ್ಲಿ ಹೊಂದಿಕೊಂಡಿರುವಂತೆ ಬ್ರಹ್ಮನಲ್ಲಿ ಏಕಕಾಲದಲ್ಲಿ ಏಕ ತ್ರಿತವಾಗಿ ಸಮಾವೇಶವಾಗುತ್ತವೆ. ಆಕಳಿನ ಉದಾಹರಣೆ ಪ್ರಕೃತ ವಾಕ್ಯಕೆ ಹೊಂದುವುದಿಲ್ಲ. ಸೂರ್ಯನಲ್ಲಿ ಬೆಳಕು ಶಾಖಗಳು, ಹೂವಿ ನಲ್ಲಿ ಕೆಂಪು ಮಿದುವು ವಾಸನೆಗಳು ಯೋಗ್ಯ ಉಪಮೆಗಳು. ಹೀಗಾಗಿ ಬ್ರಹ್ಮ ನಿರ್ಗುಣನೆಂಬುದು, ಬ್ರಹ್ಮನಲ್ಲಿ ಅನೇಕ ಗುಣಗಳ ಸಮಾವೇಶವಾಗಲಾರದೆಂಬುದು ಉಪನಿಷದ್ವಾಕ್ಯದ ಸ್ವೀಕಾರ ಸೂಚಕ (Affirmative) ಸ್ವಭಾವಕ್ಕಾಗಲಿ ತರ್ಕಕ್ಕಾಗಲಿ ಸಮ್ಮತವಲ್ಲ.'

ಯಾದವನಿಗೆ ಸಿಟ್ಟು ಬಂತು. 'ಗರ್ವಾಂಧ, ನನ್ನ ಪ್ರವಚನ ನಿನಗೆ ಸರಿಬರದಿದ್ದರೆ ನನ್ನಲ್ಲಿರಬೇಡ ಹೊರಟು ಹೋಗು' ಎಂದು ಗದರಿಸಿದ. ಗುರು ವಚನದಂತೆ ಆಚಾರ್ಯರು ಪ್ರಣಾಮಮಾಡಿ ಗುರುಕುಲವ ಬಿಟ್ಟು

ಹೋದರು. ಯಾದವ ರಾಮಾನುಜ ಸಂವಾದವು ಅಲ್ಲಲ್ಲಿ ಹರಡಿ ಪಂಡಿತರ ಕಿವಿಗೂ ಬಿತ್ತು. ಪಂಡಿತ ಲೋಕವು ಇದನೆಲ್ಲ ಕೇಳಿ ರಾಮಾನುಜರ ಭಕ್ತಿವಂತ ಹೃದಯಕ್ಕೂ ವಾಕ್ಯಾರ್ಥ ರೀತಿಗೂ ಬೆರಗಾಗಿ "ಯಾದವಾ ಪಾದಿತಾಪಾರ್ಥ ವೃಕ್ಷಚ್ಛೇದ ಕುಠಾರ"ನೆಂದು ಆಚಾರ್ಯರನು ಪ್ರೇಮ ದಿಂದ ಸನ್ಮಾನಿಸಿದರು.

---

## ೩

ಆಚಾರ್ಯರ ಅದ್ಭುತ ಮೇಧಾಸಂಪತ್ತಿ, ಭಕ್ತಿಪೂರ್ಣ ಹೃದಯ, ಸ್ವತಂತ್ರ ರೀತಿ—ಇವೆಲ್ಲ ಪಂಡಿತರಿಗೆ ಅವರ ಮೇಲೆ ಅಭಿಮಾನಕಾರಣ ವಾಯಿತು. ಆದರೆ ಯಾದವನಿಗೆ ಮಾತ್ರ ಅಸೂಯೆಗೆ ಬೀಜವಾಯಿತು. ಜಗದೇಕಪಂಡಿತನಾಗಿದ್ದವನಿಗೆ ಪ್ರತಿಸ್ಪರ್ಧಿಯೊಬ್ಬನು ಹುಟ್ಟಿದರೆ ಇವನ ರಾಜ್ಯವು ಹೋಗದೆ? ಪಾಂಡಿತ್ಯವೂ ಒಂದು ರೀತಿಯಿಂದ ಅರಸುತನವೇ ನಮ್ಮಲ್ಲಿ. ಈ ಅರಸೊತ್ತಿಗೆಯು ಇನ್ನೊಬ್ಬರ ಪಾಲಾಗುವುದೆಂದರೆ ಸುಮ್ಮನಿರುವುದು ಎಂಥ ಹೇಡಿತನ! ಪಾಂಡಿತ್ಯವೂ ಭೀಮ ಭವಾರ್ಣವ ವಾಗಬೇಕೇ! ಏನೋ. ಅಂತೂ ಪಂಡಿತರಾಜರಿಗೇನು ನಮ್ಮಲ್ಲಿ ಕಡಮೆಯಿಲ್ಲ.

ಯಾದವನಿಗೆ ಮಾತ್ಸರ್ಯ ಹೆಚ್ಚಾಯಿತು. ಮುಂದೆ ಆಚಾರ್ಯರು ಅಜೇಯ ಶತ್ರುವಾಗಬಹುದೆಂದು ಹೆದರಿದ. ಮೊಳಕೆಯಾಗಿದ್ದಾಗಲೇ ಹಗೆಯನು ನಿರ್ಮೂಲ ಮಾಡಬೇಕೆಂಬಾಸೆ ಬಲವಾಯಿತು. ಏನಾದರೂ ಹಂಚಿಕೆ ಮಾಡಿ ಆಚಾರ್ಯರನು ಕೊಲ್ಲಬೇಕೆಂಬ ಆಸೆ ತಡೆಯಲಾರದಷ್ಟು ಬಲವಾಯಿತು. ಒಂದು ದಿನ ಶಿಷ್ಯವೃಂದವನೆಲ್ಲ ಕರೆದು ಆಚಾರ್ಯರ ಅವಿಧೇಯತೆಯ ಹೇಳಿ, ಮುಂದೆ ಪ್ರಬಲ ಶತ್ರುವಾಗಬಹುದಾದ ಸಂಭ ವವ ತಿಳಿಸಿ ಕೊಲ್ಲಲು ಹಂಚಿಕೆಯ ಕೇಳಿದರು. ಅವರು ಹೇಳಿದುದು ಯಾದವನ ಮನಸಿಗೆ ಸರಿದೋರಲಿಲ್ಲ. ಎಲ್ಲದರಲ್ಲೂ ಪಾಪದ ಸೋಂಕಿತ್ತು. ಪಾಪವೆಸಿಸಬಾರದು ಕೆಲಸ ಆಗಿರಬೇಕು ಎಂದು ಯೋಚಿಸಿ ಯೋಚಿಸಿ ಯಾದವನಿಗೊಂದು ಹಂಚಿಕೆ ಹೊಳೆಯಿತು. ಆಚಾರ್ಯರನು ಕರೆಯಿಸಿ

ಮೊದಲಿಗಿಂತ ಮಿಗಿಲಾಗಿ ಆದರಿಸಿ, ಜೀವದ ಗೆಳೆಯನಂತೆಯೇ ಕಂಡು, ಕೆಲದಿನ ಹೀಗೆ ನಟಿಸಿ, ಆಮೇಲೆ ಗಂಗಾಸ್ನಾನಕೆ ಶಿಷ್ಯವೃಂದ ಸಮೇತ ಹೊರಟು, ಅಲ್ಲಿ ಮಣಿಕರ್ಣಿಕಾ ಘಟ್ಟದಲಿ ಆಚಾರ್ಯರನು ಮುಳುಗಿಸಿ ಸಾಯಿಸಿ ಗಂಗಾ ಮರಣದ ಪುಣ್ಯವನು ಆಚಾರ್ಯರ ಪಾಲಿಗೆ ಕೊಟ್ಟು ತಾನು ಪಾಪಿಯೆನಿಸಿಕೊಳದೆ ನಿಶ್ಚಿಂತೆಯಿಂದಿರಬಹುದು. ಇದೇ ಯಾದವನ ಗೂಢತಂತ್ರ. ನೀತಿ ಧರ್ಮಕೆ ಬಂದ ಭವಣೆಯೆ !

ಕಲಿಯುಗದ ಲಾಕ್ಷಾದಹನಕೆ ಅಣಿಯಾಯಿತು. ಆಚಾರ್ಯರನು ಕರೆದು ಹಿಂದೆ ಆದ ತಪ್ಪಿಗೆ ಸವರಣೆಮಾಡಿ ಅನೇಕ ವಿಧ ಪ್ರೇಮದಿಂದ ಸಂತಸಗೊಳಿಸಿ ಎಂದಿನಂತೆ ತಮ್ಮೊಡನೆ ಇದ್ದು ಅಧ್ಯಯನ ಮಾಡಲು ಹೇಳಿದ್ದಾಯಿತು. ಅಮಾಯಕರು ಆಚಾರ್ಯರು. ಒಪ್ಪಿದರು. ಹೀಗೆ ಕೆಲದಿನ ಕಳೆಯಿತು.

ಯಾದವನು ಗಂಗಾ ಯಾತ್ರೆಯ ಸಿದ್ಧತೆ ಮಾಡಿದ. ಆಚಾರ್ಯರೂ ಗೋವಿಂದಮಿಶ್ರರೂ ಹೊರಟರು. ಗುರುಗಳಂತೂ ಹೊರಟೇ ಇದ್ದರು. ಕೆಲದಿನ ಪಯಣಮಾಡಿದ ಮೇಲೆ ಗೋವಿಂದಮಿಶ್ರನಿಗೆ ಯಾದವನ ತಂತ್ರ ಹೇಗೋ ತಿಳಿಯಿತು. ಆದರೆ ಆಚಾರ್ಯರಿಗೆ ತಿಳಿಸಲು ಅವನಿಗೆ ಸಮಯ ದೊರೆಯಲಿಲ್ಲ. ಗೋವಿಂದಮಿಶ್ರನಿಂದ ಹೀಗಾದೀ ತೆಂದೇ ಅವನೂ ಆಚಾರ್ಯರೂ ಒಂದು ಕಡೆ ಸೇರದಂತೆ ಎಲ್ಲರೂ ನೋಡಿ ಕೊಳುತಿದ್ದರು. ಒಂದು ದಿನ ಸಂಜೆ ವಿಂಧ್ಯಾರಣ್ಯದಲಿ ಹೋಗುವಾಗ ಆಚಾರ್ಯರು ಶೌಚಕಾಗಿ ಹಿಂದುಳಿದರು. ಗೋವಿಂದಮಿಶ್ರನು ಯಾರಿಗೂ ತಿಳಿಯದಂತೆ ಅಲ್ಲೇ ಉಳಿದುಕೊಂಡು ಎಲ್ಲ ಸುದ್ದಿಯನು ಆಚಾರ್ಯರಿಗೆ ತಿಳಿಸಿ ತಪ್ಪಿಸಿಕೊಳಹೇಳಿ ಹೊರಟುಹೋದನು.

ಗೋವಿಂದನ ಮಾತಿನಂತೆ ಆಚಾರ್ಯರು ತಪ್ಪಿಸಿಕೊಂಡು ಎತ್ತೋ ನಡೆದರು. ಅನ್ನವಿಲ್ಲ, ನೀರಿಲ್ಲ. ತಿಳಿಯದ ಕಾಡು. ದಾರಿಯಿಲ್ಲದ ಬರೀ ಗಿಡಗೆಂಟೆ. ಬರಿಗಾಲು. ದಾರಿ ತುಂಬ ಕಲ್ಲು ಮುಳ್ಳು. ರಾತ್ರಿಯೆಲ್ಲ ಮಳೆ. ಹಗಲೆಲ್ಲ ಸುಡುವಂಥ ಬಿಸಿಲು. ಕಾಲಲ್ಲಿ ರಕ್ತ ಸೋರಿ ಬಳಲಿ ಬಸವಳಿದು ಕಂಗೆಟ್ಟು ಕಾಲ್ನೋವಿನಿಂದ ಒಂದು ಮರದ ಕೆಳಗೆ ಕೂತು

ಬಿಟ್ಟರು ಮುಂದೆ ನಡೆಯಲಾರದೆ. ದಾರಿಯಿಲ್ಲ; ಧೈರ್ಯವಿಲ್ಲ. ನಿಸ್ಸಹಾಯರಾಗಿ ಏನುಮಾಡಲೂ ತಿಳಿಯದೆ ಮಂಕುಹಿಡಿದಂತಾಯಿತು. ಆಗ ಕಿರಾತನೊಬ್ಬ ಸತೀದ್ವಿತೀಯನಾಗಿ ಅಕಸ್ಮಾತ್ತಾಗಿ ಅಲ್ಲಿಗೆ ಬಂದ. ಭಕ್ತರಿಲ್ಲದೆ ಭಗವಂತನಿಗೆ ನೆಮ್ಮದಿಯಿಲ್ಲಂತೆ. ತನ್ನ ಭಕ್ತರಿಗೆ ವಿಪತ್ತು ಬಂದಾಗ ಧನುರ್ಬಾಣ ಸಮೇತನಾಗಿ ಸತಿಯೊಡನೆ ಸಾಕ್ಷಾತ್ಕಾರವಾಗುವುದು ಅವನ ಸ್ವಭಾವವಂತೆ. ನಿರ್ಬಲರ ಬಲವಲ್ಲೇ ರಾಮ.

ಅವರನ್ನು ನೋಡಿ ಆಚಾರ್ಯರಿಗೆ ಹಿಡಿಸಲಾರದ ಸಂತೋಷವಾಯಿತು. 'ನನ್ನ ಭಾಗ್ಯದೇವತೆಯಂತೆ ಬಂದಿರಿ. ನೀವು ಯಾರು. ಎಲ್ಲಿಂದ ಬಂದಿರಿ' ಎಂದು ಕೇಳಿದರು. ಆ ದಂಪತಿಗಳು 'ಸಿದ್ಧಾಶ್ರಮವಾಸಿಗಳು ನಾವು. ಕಾಂಚೀಪುರಕೆ ಹೋಗುತಿದೇವೆ' ಎನಲು, 'ನಾನೂ ನಿಮ್ಮೊಡನೆ ಕರಿವರದನ ದರುಶನಕೆ ಬರುವೆ'ನೆಂದು ಆಚಾರ್ಯರು ಅವರೊಡನೆ ಕಂಚಿಗೆ ಹೊರಟರು. ಹಗಲೆಲ್ಲ ನಡೆದು ವಿಂಧ್ಯಾಟವಿಯನು ದಾಟಿ ಸಂಜೆಗೆ ಒಂದು ದೊಡ್ಡ ಮರದ ನೆರಳಲಿ ತಂಗಿದರು. ರಾತ್ರಿ ಮುಂಜಾವಿನ ಹೊತ್ತಿಗೆ ಆ ಕಿರಾತನ ಹೆಂಡತಿ ಬಾಯಾರಿಕೆಗಾಗಿ ನೀರು ಬೇಕೆಂದಳು. ಬೆಳಕುಹರಿದ ಮೇಲೆ ತರುವೆನೆಂದು ಕಿರಾತ ಮಲಗಿದವನು ಏಳಲಿಲ್ಲ. ಎಚ್ಚರದಿಂದಿದ್ದ ಆಚಾರ್ಯರದನು ಕೇಳಿ ತಾವೇ ನೀರು ತರಲು ಹೋದರು. ನೀರು ತೆಗೆದುಕೊಂಡು ಹಿಂದಿರುಗುವ ವೇಳೆಗೆ ಬೆಳಕು ಹರಿಯಿತು. ಸೂರ್ಯದೇವನು ನಗುತ ನಗುತಲಿ ಬಂದ. ಹಿಂದಿರುಗಿ ಬಂದು ನೋಡಲು ಮರದ ಕೆಳಗೆ ಕಿರಾತನೂ ಇಲ್ಲ, ಅವನ ಹೆಂಡತಿಯೂ ಇಲ್ಲ. ಬೆದರಿ ಬೆರಗಾಗಿ ಅತ್ತಿತ್ತ ನೋಡಲು, ಹತ್ತಿರವೆ ಜನಗಳ ಸಪ್ಪಳ ಕೇಳಿಸಿತು. ಸ್ವಲ್ಪ ಮುಂದೆ ಹೋಗಲು ದೊಡ್ಡ ಪುಷ್ಕರಿಣಿ. ಅಲ್ಲಿ ಜನರಿದ್ದರು. ಆಚಾರ್ಯರು ಅಚ್ಚರಿಯಿಂದ 'ಇದು ಯಾವ ಊರು' ಎಂದು ಅಲ್ಲಿದ್ದವರನು ಕೇಳಿದರು. 'ಹುಚ್ಚ! ಎದುರಿಗೆ ಕಾಣುವುದಿಲ್ಲೇನು ಪುಣ್ಯಕೋಟಿ ವಿಮಾನ' ಎಂದರವರು. ತಲೆಯೆತ್ತಿ ಮೇಲೆ ನೋಡಲು ವರದರಾಜನ ದೇವಾಲಯದ ಗೋಪುರ. ಆಚಾರ್ಯರಿಗೆ ಎಲ್ಲೂ ಇಲ್ಲದ ಅಚ್ಚರಿ. ಒಂದೇ ದಿನದೊಳಗೆ ಒಂದು ಸಾವಿರ ಮೈಲು ನಡೆಯುವುದೆಂದರೇನು! ಭಗವಲ್ಲೀಲೆಯಲ್ಲದೆ

ಮತ್ತ್ಯಾರೂ ಅಲ್ಲ. ಬಂದಿದ್ದ ಕಿರಾತ ದಂಪತಿಗಳು ಶ್ರೀ ವರದರಾಜ ರುಕ್ಮಿಣಿಯರಲ್ಲದೆ ಮತ್ತಾರೂ ಅಲ್ಲವೆಂದು ಮನಸಿಗೆ ಹೊಳೆಯಿತು.

ಹಿಡಿಸಲಾರದ ಹರುಷ. ಸೀತಾಮಾತೆಯನು ಅಶೋಕವನದಲಿ ಕಂಡಾಗ ಹನುಮಂತನಿಗೆ ಆದ ಹರುಷ. ಚೂಡಾಮಣಿಯನ್ನು ನೋಡಿದಾಗ ಶ್ರೀರಾಮನಿಗೆ ಆದ ಆನಂದ. ನಿರ್ಬಲರ ಬಲವಲ್ಲೇ ರಾಮ! ಭಕ್ತರ ಬೆಳಕಲ್ಲೇ ಭಗವಂತ! ಹೀಗೆ ಸಂತಸಗೊಂಡು ಆಚಾರ್ಯರು ಪ್ರೇಮದಿಂದ—'ಭಗವನ್, ಅರ್ಜುನನಿಗೆ ನಿನ್ನ ಸೌಂದರ್ಯಮಯ ವಿಶ್ವರೂಪವ ತೋರಿದೆ. ಕಿರಾತನಾಗಿ ಬಂದು ನನಗೆ ನಿಜರೂಪವ ತೋರದೆ ಹೋದೆ. ಕಿರಾತನೆಂದೇ ನಂಬಿ, ಸಹಚರನೆಂದೇ ಬಗೆದು ಅವಮರ್ಯಾದೆಯಾಗಿ ನಿನ್ನೊಡನೆ ಮಾತಾಡಿದ್ದರೆ, ಇಬ್ಬರೂ ಜೊತೆಗಾರರಂತೆ ಕುಳಿತಾಗ, ಊಟ ಮಾಡಿದಾಗ, ಮಲಗಿದಾಗ, ದಾರಿ ನಡೆದಾಗ, ಮಾತಾಡಿದಾಗ ಏನಾದರೂ ಅಪಚಾರವಾಗಿದ್ದರೆ, ಕನಸು ಮನಸಿನೊಳಗಿಲ್ಲದೆ ತಿಳಿಯದೆ ಆದ ಅಪಚಾರವ ಮನ್ನಿಸಯ್ಯ ಅಪ್ರಮೇಯಾ'* ಎಂದು ಭಗವಂತನ ಕಮಲಪದಕೆ ಬಿನ್ನಹದ ಮಾಲೆ ಸುತ್ತಿ ಆನಂದವಾರಿಧಿಯೊಳಗೆ ಆಟವಾಡುತಿದ್ದರು. ನಕ್ಕು ನಮಿಸಿ, ಪುನಃಪುನಃ ಪ್ರಣಮಿಸಿ ಅಲೌಕಿಕಾನಂದದ ಕಣ್ಣನಿ ಸುರಿಸಿ ಭಕ್ತ್ಯತಿರೇಕದಿಂದ ಸಂತುಷ್ಟರಾಗಿದ್ದರು.

ಕಾಂಚೀಪುರವಾಸಿಗಳಿಗೆ ಆಚಾರ್ಯರಲ್ಲಿ ಆದರ ಮತ್ತಷ್ಟು ಬೆಳೆಯಿತು. ಕಾಂತಿಮತಿ ದೇವಿಗಂತೂ ಮಗ ಮತ್ತೆ ಬದುಕಿಬಂದಂತೆ ಅನಿಸಿತು. ಕಾಯುವ ಕೈ ಅವನದಿರಲು ನಮ್ಮ ಬೇಳೆ ಬೆಂದೀತೇ! ಭಗವಾನನ ಬೆಂಬಲವಿರಲು ಭಕ್ತನಿಗೆ ವಿಪತ್ತೆಲ್ಲಿಯದು?

---

* ಸಖೇತಿ ಮತ್ವಾ ಪ್ರಸಭಂ ಯದುಕ್ತಂ। ಹೇ ಕೃಷ್ಣ ಹೇ ಯಾದವ ಹೇ ಸಖೇತಿ॥
ಅಜಾನತಾ ಮಹಿಮಾನಂ ತವೇದಂ। ಮಯಾ ಪ್ರಮಾದಾತ್ಪ್ರಣಯೇನವಾಪಿ ॥ ೪೧ ॥
ಯಚ್ಚಾವಹಾಸಾರ್ಥಮಸತ್ಕೃತೋಸಿ। ವಿಹಾರ ಶಯ್ಯಾಸನ ಭೋಜನೇಷು ॥
ಏಕೋಥವಾಪ್ಯಚ್ಯುತ ತತ್ಸಮಕ್ಷಂ। ತತ್ಕ್ಷಾಮಯೇತ್ವಾಮಹ ಮಪ್ರಮೇಯಮ್
॥ ೪೨ ॥
—ಗೀತಾ ಅ. ೧೧.

೪

ಇತ್ತ ಆಚಾರ್ಯರನು ಕಾಣದೆ ಯಾದವಪ್ರಕಾಶನು ಶಿಷ್ಯರನು ಹುಡುಕಲು ಕಳಿಸಿದ. ಎಲ್ಲೂ ಕಾಣಲಿಲ್ಲ. ಯಾವುದೋ ಅಡವಿ ಮೃಗದ ತುತ್ತಾಗಿರಬೇಕೆಂದು ಬಗೆದು ಸಂತಸಗೊಂಡ. ಆದರೂ ಲೌಕಿಕ ಮಾಯೆಗಾಗಿ ಯಾದವನೂ ಶಿಷ್ಯವೃಂದವೂ ಒಂದು ಗಳಿಗೆ ದುಃಖವನಭಿನಯಿಸಿದರು.

ಆಚಾರ್ಯರು ಅಂತರಿಸಿದರೂ ಆಡಿದ ಮಾತಿನಂತೆ ಕಾಶಿಗೆ ಹೋಗಲೇಬೇಕಿತ್ತಷ್ಟೆ! ಮುಂದೆ ಪಯಣ ಸಾಗಿತು. ಪ್ರಯಾಗದ ತ್ರಿವೇಣೀ ಸಂಗಮಕ್ಕೆ ಬಂದರು. ಆಗ ಮಾಘಮಾಸ. ಯಥಾವಿಧಿ ಮಾಘ ಸ್ನಾನಕ್ಕೆ ಮೊದಲಾಯಿತು. ಒಂದು ದಿನ ಮುಂಜಾನೆ ಸ್ನಾನಮಾಡುವಾಗ ಗೋವಿಂದನ ಕೈಗೊಂದು ಶಿವಲಿಂಗ ದೊರೆಯಿತು. ಅದನಾತ ತಂದು ತೋರಿಸಲು ಯಾದವನು 'ಮಗು, ವಿಶ್ವನಾಥನು ನಿನ್ನ ಮೇಲೆ ಅನುಗ್ರಹಮಾಡಿ ನಿನಗೀರೀತಿಯಿಂದ ಪ್ರಸನ್ನನಾಗಿರುವ. ನೀನೇ ಪುಣ್ಯಶಾಲಿ' ಎಂದ. ಅಂದಿನಿಂದ ಗೋವಿಂದನು ಶಿವದೀಕ್ಷಾಪರನಾದ. ಮಾಘಸ್ನಾನ ಮುಗಿದ ಮೇಲೆ ಎಲ್ಲರೂ ಹಿಂದಿರುಗಿದಾಗ ಗೋವಿಂದನು ತನ್ನೂರಾದ ಮಳಲ ಮಂಗಳದಲ್ಲೇ ನಿಂತು ಅಲ್ಲಿ ಆ ಶಿವಲಿಂಗವನ್ನು ಪ್ರತಿಷ್ಠಿಸಿ ಭಸ್ಮ ರುದ್ರಾಕ್ಷಾ ಧಾರಿಯಾಗಿ ಶಿವಪೂಜಾ ಪರಾಯಣನಾದ. ಕೆಲದಿನದ ಮೇಲೆ ಹೆಸರಾಗಿ ಕಾಳಹಸ್ತಿ ಕ್ಷೇತ್ರದ ಮಹಾಜನರು ತಮ್ಮೆಲ್ಲರಿಗೆ ಮಾರ್ಗದರ್ಶಿಯಾಗಿ ಅಲ್ಲೇ ಬಂದಿರಬೇಕೆಂದು ಬೇಡಿದರು. ಗೋವಿಂದನದಕೊಪ್ಪಿ ಕಾಳಹಸ್ತಿಯಲ್ಲಿ ನೆಲೆಗೊಂಡ.

ಉಳಿದವರೆಲ್ಲ ಕಂಚಿಗೆ ಹಿಂದಿರುಗಿ ಬಂದರು. ಬಂದೊಡನೆ ಆಚಾರ್ಯರು ಹಿಂದಿರುಗಿ ಬಂದ ಕತೆಯೆಲ್ಲ ತಿಳಿಯಿತು. ಯಾದವನಿಗಾದ ಆಶಾಭಂಗ ಅಷ್ಟಿಷ್ಟಲ್ಲ. ಆದರೂ ಹರುಷವನಭಿನಯಿಸಿ ಅಕ್ಕರೆಯಿಂದ ಮಾತಾಡಿಸಿ ಮೈದಡವಿ ಲೌಕಿಕ ಮಾಯೆಯನ್ನು ಪೂರ್ಣಗೊಳಿಸಿದ. ಆಚಾರ್ಯರೇನೋ ಆ ದ್ರೋಹವನ್ನು ಮನಸಿಗೆ ತಾರದೆ ಮುನ್ನಿನಂತೆ ಯಾದವನ ಬಳಿಯಲ್ಲೇ ಅಧ್ಯಯನ ನಡೆಸಿದರು. ಆದರೆ ಯಾದವನಿಗೆ

ಮಾತ್ರ ಆಚಾರ್ಯರಂತೆ ದ್ವೇಷಕ್ಕೆ ಬದಲು ಪ್ರೇಮವನವಲಂಬಿಸುವುದು ಗೊತ್ತಿರಲಿಲ್ಲ. ಅಷ್ಟೇ ಅಲ್ಲ, ತನ್ನೆದೆಯೊಳಗಿನ ದ್ವೇಷಾಸೂಯೆಗಳನ್ನೇ ತೊಳೆದು ನಿರ್ಮಲ ಪ್ರೇಮದಿಂದ ಅದನ್ನು ತುಂಬಿಕೊಳ್ಳುವುದೇ ತಿಳಿಯದು. ಅಂತೇ ಅವನ ಅಸೂಯೆಯು ಸಣ್ಣ ಹುಳುವಾಗಿದ್ದುದು ಈಗ ದೊಡ್ಡ ಹಾವಾಯಿತು.

ಇಂಥ ಕತೆಗಳಿಗೆ ಕಾಲು ಬಹಳ. ನಡೆದ ಒಂದೆರಡು ದಿನಗಳಲ್ಲೇ ನಾಡಿನೊಳಗೆಲ್ಲ ಆಚಾರ್ಯರ ಮಹಿಮೆಯ ಸುದ್ದಿ ಹರಡಿತು. ಶ್ರೀರಂಗಕ್ಕೂ ತಲುಪಿತು. ಯಾದವ ರಾಮಾನುಜ ಸಂವಾದ, ಸಗುಣ ಬ್ರಹ್ಮದ ಸಿದ್ಧಾಂತ, ಆಚಾರ್ಯರ ಭಕ್ತಿವಂತ ಹೃದಯ, ಯಾದವನ ಕುತಂತ್ರ, ಪರದರಾಜನ ಬೆಂಬಲ, ದ್ರೋಹದ ಬದಲಾಗಿ ಆಚಾರ್ಯರ ಸರಲ ಪ್ರೇಮ —ಇವೆಲ್ಲ ಯಾಮುನಾಚಾರ್ಯರ ಮನಸಿಗೆ ಸಾಟಿಯಿಲ್ಲದ ಸಂತಸ ಕೊಟ್ಟವು. ತಮ್ಮ ಕೈಯ ತ್ರಿದಂಡವನು ಹಿಡಿದು ತಮ್ಮ ತರುವಾಯ ಶ್ರೀವೈಷ್ಣವ ಮಂಡಲಿಗೆ ದಾರಿ ತೋರುವ ಚುಕ್ಕೆಯಂತೆ ಹೊಳೆಯ ಬಲ್ಲ ಶಿಷ್ಯನಿಗಾಗಿ ತವಕಗೊಳುತಿದ್ದ ಯಾಮುನಾಚಾರ್ಯರ ಜೀವಕ್ಕೆ ಹಿಡಿಸಲಾರದ ಹರುಷವಾಯಿತು. ಕೂಡಲೆ ರಾಮಾನುಜಾಚಾರ್ಯರನು ನೋಡಿ ಬರಲು ನಿಶ್ಚಯಿಸಿ ಶ್ರೀರಂಗನಾಥನ ಆಣತಿ ಪಡೆದು ಶಿಷ್ಯ ಮಂಡಲಿಯೊಡನೆ ಕಂಚಿಗೆ ಹೊರಟು ಬಂದರು. ಕಂಚಿಯ ಕಾಂಚೀ ಪೂರ್ಣರು ಯಾಮುನಾಚಾರ್ಯರ ಪ್ರೀತಿಯ ಶಿಷ್ಯ. ಗುರುಗಳಿಗೆಲ್ಲ ರೀತಿಯ ಸೌಕರ್ಯಗಳನು ಕಲ್ಪಿಸಿ ತಮ್ಮ ಮನೆಯಲ್ಲಿಯೇ ಅವರಿಗೆ ಬಿಡಾರ ಮಾಡಿದರು. ಕಂಚಿಯ ಮಹಾಜನರಿಗೆ ಆಗ ಹಬ್ಬ. ಎಲ್ಲರೂ ಭಾಗವತೋತ್ತಮ ಯಾಮುನಾಚಾರ್ಯರ ಬಳಿ ಸೇರಿ ಅವರ ದಿವ್ಯ ವಾಣಿಯನು ಕೇಳಿ ತೃಪ್ತರಾಗುತ್ತಿದ್ದರು.

ಪೂಜಾ ಸಮಯದಲ್ಲಿ ಎಲ್ಲರೊಡನೆ ಯಾಮುನಾಚಾರ್ಯರು ವರದ ರಾಜಸ್ವಾಮಿಯ ಗುಡಿಗೆ ಬಂದರು. ಹಿರಿಯರು ಬರುತಿರಲು ಗುಡಿ ಯವರೆಲ್ಲ ಗುಂಪಾಗಿ ಶಠಗೋಪ ತೀರ್ಥಪ್ರಸಾದಾದಿಗಳೊಂದಿಗೆ ಬಂದು ಇದಿರುಗೊಂಡು ದೇವ ಸನ್ನಿಧಿಗೆ ಕರೆದುಕೊಂಡುಹೋದರು.

ಅಲ್ಲಿ ಕರ್ಪೂರ ಆರತಿಯಾಗುತಿತ್ತು. ಯಾಮುನಾಚಾರ್ಯರು ವರದ ರಾಜ ಸನ್ನಿಧಿಗೆ ಬಂದರೆಂದು ಕೇಳಿ ಎಲ್ಲರೂ ಆ ಮಹಾತ್ಮನ ನೋಡಲೆಂದು ಅಲ್ಲಿಗೆ ಬಂದರು. ಎಂದಿನಂತೆ ಯಾದವನೂ ಶಿಷ್ಯ ಸಮೇತನಾಗಿ ಹಾರತಿಗೆ ಬಂದಿದ್ದ. ಅವರೆಲ್ಲರ ನೋಡಿ ರಾಮಾನುಜರಿವರೊಳಗೆ ಯಾರೆಂದು ಯಾಮುನಾಚಾರ್ಯರು ಹತ್ತಿರಿದ್ದವರನ್ನು ವಿಚಾರಿಸಿದರು. 'ಆ ನಡುವೆ ಇರುವ ಅದ್ಭುತ ಪ್ರತಿಭಾಸಮನ್ವಿತ ಮೂರ್ತಿ, ಕಂಗೊಳಿಸುವ ಕಣ್ಣು. ಹೊಳೆಹೊಳೆಯುವ ಮೋರೆ. ಶ್ರೀರಾಮನಂತೆ ಭದ್ರ ಭುಜ, ಆಜಾನುಬಾಹು—ಅವರೇ ರಾಮಾನುಜಾಚಾರ್ಯರು' ಎಂದು ಯಾರೋ ಹೇಳಿದರು.

ಹಾರತಿಯಾಗಿ ಎಲ್ಲರೂ ಹೊರಟುಹೋದ ಮೇಲೆ ಯಾಮುನಾಚಾರ್ಯರು ಗರ್ಭಗುಡಿಗೆ ಹೋಗಿ ವರದರಾಜನ ಮುಂದೆ ಕೈಜೋಡಿಸಿ ನಿಂತರು. 'ದೇವಾ! ನೀನು ವರದರಾಜ. ಅಂತೇ ನಿನ್ನನ್ನು ವರವ ಬೇಡುವೆ. ಈ ರಾಮಾನುಜನು ಶ್ರೀವೈಷ್ಣವ ಪಂಥದ ದಾರಿಗರ ದೀಪವಾಗಲಿ. ಶ್ರೀವೈಷ್ಣವ ಸಿದ್ಧಾಂತ ವಿಜಯಧ್ವಜವಾಗಲಿ. ಇದನ್ನು ಮಾಡಯ್ಯ' ಎಂದು ಬೇಡಿದರು.

ಮನೆಗೆ ಬರುವ ಹೊತ್ತಿಗೆ ಶ್ರೀರಂಗದಿಂದ ಆಳುಗಳು ಬಂದಿದ್ದರು. ಕೆಲಸವು ಎಂಥದಿತ್ತೋ ಏನೋ ಒಂದು ಗಳಿಗೆಯೂ ತಡಮಾಡದೆ ಯಾಮುನಾಚಾರ್ಯರು ಹೊರಟುಹೋದರು.

× × ×

ಯಾಮುನಾಚಾರ್ಯರು ಬೇಡಿದ ವರವ ಕೊಡಬೇಕೆಂದು ವರದ ರಾಜನಿಗನಿಸಿತೋ ಏನೋ. ಅಂತೂ ಪ್ರಸಂಗಗಳೇನೋ ಹಾಗೆ ಕೂಡಿ ಬಂದವು. ಯಥಾವಿಧಿಯಾಗಿ ಅಧ್ಯಯನ ನಡೆದಿತ್ತು ಯಾದವನ ಶಿಷ್ಯರದು. ಒಂದು ದಿನ ಚಾಳುಕ್ಯರ ವೀರರಾಜೇಂದ್ರನ ಆಳುಗಳು ಯಾದವನನು ರಾಜಧಾನಿಗೆ ಕರೆಯಲು ಬಂದರು. ರಾಜಕುಮಾರಿಗೆ ಬ್ರಹ್ಮರಾಕ್ಷಸ ಹಿಡಿದಿತ್ತಂತೆ. ಎಷ್ಟೋ ಜನ ಮಾಂತ್ರಿಕರು ಬಿಡಿಸಲಾರದೆ ಹೋದರಂತೆ. ಯಾದವನಿಂದ ಆದೀತೆಂದು ಆಳುಗಳ ಕಳಿಸಿದ

ಕರೆಯಲು ಅರಸು. ಎಲ್ಲಾ ಕೇಳಿ ಯಾದವನರಮನೆಗೆ ಶಿಷ್ಯರೊಂದಿಗೆ ಹೋದ. ದೊರೆ ಮರ್ಯಾದೆ ಮಾಡಿ ಅಂತಃಪುರಕೆ ಕರೆದೊಯ್ಯಲು ಯಾದವನು ಮಂತ್ರಗಳನತಿಭೀಕರವಾಗಿ ಒದರುತ ಅರಸು ಮಗಳ ಬಳಿ ಸಾರಿ ರಾಕ್ಷಸೋಚ್ಚಾಟನೆಗೆ ಸಿದ್ಧಮಾಡಿದ. ಹೊರಟುಹೋಗೆಂದು ಅದಕಪ್ಪಣೆಮಾಡಿದ. ಆದರೆ ಅದು—ಅರಸು ಮಗಳು—ಯಾದವನ ಕಡೆ ಕಾಲು ನೀಡಿ ಕುಳಿತು ತಿರಸ್ಕಾರದಿಂದ 'ಯಾದವ! ನಿನ್ನ ಮಂತ್ರ ತಂತ್ರಗಳು ನಾನರಿಯದವಲ್ಲ. ನಾನು ಬ್ರಹ್ಮರಾಕ್ಷಸ. ನಿನ್ನ ಮಂತ್ರ ವಾಗಲಿ ನೀನಾಗಲಿ ನನಗೇನೂ ಮಾಡಲಾರಿರಿ. ನಾನಾರೆಂಬುದೇಕೆ, ನೀನಾರೆಂಬುವೇ ನಿನಗೆ ತಿಳಿಯದು. ಹೊರಡು!' ಎಂದು ಗರ್ಜಿಸಿ ತಂತೆ. 'ಹಾಗಾದರೆ ನಿನಗೆ ಗೊತ್ತೋ?' ಯಾದವನು ಸಿಟ್ಟಿನಿಂದ ಕೇಳಿದ. 'ಕೇಳು. ಮಧುರಾಂತಕಾಗ್ರಹಾರದ ಕೆರೆಯ ಏರಿಯ ಬಿಲದಲ್ಲಿ ಬದುಕಿದ್ದ ಒಂದು ಉಡವು ನೀನು. ಒಮ್ಮೆ ವೇದವೇದಾಂಗ ಪಾರಂಗತರಾದ ಶ್ರೀವೈಷ್ಣವರು ಕೆಲವರು ತಿರುಪತಿಗೆ ಹೋಗುವಾಗ ದಾರಿಯೊಳಗೆ ಕೆರೆಯಬಳಿ ತಂಗಿ, ಅಡಿಗೆ ಮಾಡಿ ಭಗವಂತನಿಗೆ ನೈವೇದ್ಯ ಮಾಡಿ ಆ ಪ್ರಸಾದವನುಂಡು ಉಳಿದುದನು ಅಲ್ಲೇ ಬಿಟ್ಟು ಮುಂದೆ ಹೋದರು. ನೀನಾ ಉಳಿದ ಪ್ರಸಾದವ ತಿಂದೆ. ಅದರಿಂದೆ ನೀನೀಗ ಬ್ರಾಹ್ಮಣನಾಗಿರುವೆ; ಪಂಡಿತನಾಗಿರುವೆ. ನನ್ನ ಕತೆ ಕೇಳು. ನಾನೊಬ್ಬ ಬ್ರಾಹ್ಮಣ. ದೇವಪ್ರಾಜ್ಞರಲ್ಲಿ ಭಕ್ತಿಯಿಂದ ಬಾಳಿದೆ. ಒಂದು ಸಲ ಯಾಗವೊಂದು ಮಾಡಿದೆ. ಆಗ ಮಂತ್ರ ಭಾಗದಲ್ಲಿ ಸ್ವಲ್ಪ ಲೋಪ ವಾಯಿತು. ಆದುದರಿಂದ ನನಗೀ ರಾಕ್ಷಸ ಜನ್ಮ. ಇದೆಲ್ಲ ನಿನಗೇನು ಗೊತ್ತು.' ಬ್ರಹ್ಮರಾಕ್ಷಸ ಹೇಳಿತಂತೆ—'ಆಯಿತು. ಯಾರು ಬಂದರೆ ನೀನು ಹೋಗುವೆ ಹೇಳು.' ಕೇಳುವಾಗ ಯಾದವನಿಗೆ ರೋಷ. 'ನಿನ್ನ ಶಿಷ್ಯ ಗಣದ ನಡುವೆ ಅವತಾರಿ ಮಾನವನಂತೆ ಹೊಳೆವ ರಾಮಾನುಜಾ ಚಾರ್ಯರು ನಿಂತಿರುವರಲ್ಲ. ಅವರ ಅಪ್ಪಣೆಯಾದರೆ ನಾನೀ ಅರಸು ಮಗಳನು ಬಿಡುವೆ' ಎಂದಿತಂತೆ ಬ್ರಹ್ಮರಾಕ್ಷಸ. ಯಾದವನು ಆಚಾರ್ಯರ ಕಡೆ ನೋಡಿದ. ಆಚಾರ್ಯರು ಇಂಗಿತವನು ತಿಳಿದು ರಾಕ್ಷಸ ನಿಗೆ ಅಪ್ಪಣೆ ಮಾಡಿದರು. 'ಹಾಗಲ್ಲ. ನನ್ನಮೇಲೆ ದಯೆಯಿಟ್ಟು

ತಮ್ಮ ಶ್ರೀಪಾದಗಳನೆನ್ನ ತಲೆಯಮೇಲಿಡಬೇಕು' ಎಂದು ಬೇಡಿದ ಬ್ರಹ್ಮರಾಕ್ಷಸ. ಅದೂ ಆಯಿತು. 'ಆಚಾರ್ಯ! ನಾನಿನ್ನು ಅರಸು ಮಗಳನು ಬಿಡುವೆ.' 'ಬಿಟ್ಟುದರ ಗುರುತು ನಮಗೆ ಹೇಗೆ ಆಗಬೇಕು?' ಆಚಾರ್ಯರು ಕೇಳಿದರು. 'ಬಿಟ್ಟು ಈ ಅಶ್ವತ್ಥ ವೃಕ್ಷವನು ಸೇರುವೆ. ಅದರ ಕೊಂಬೆಯೊಂದು ಈಗ ಮುರಿದು ಬೀಳುವುದೇ ಅದರ ಗುರುತು.' ಈ ಮಾತು ಮುಗಿಯುವುದರೊಳಗೆ ಇದಿರಿಗಿದ್ದ ಅರಳೀಮರದ ಕೊಂಬೆ ಮುರಿದುಬಿತ್ತಂತೆ. ಅರಸು ಮಗಳೂ ಗ್ರಹಣಬಿಟ್ಟ ಚಂದ್ರಾಮನಂತೆ ಶೋಭಿಸಿದಳು. ದೊರೆಗೆ ಎಣೆಯಿಲ್ಲದ ಆನಂದ. ಯಾದವನಿಗೂ ಆಚಾರ್ಯರಿಗೂ ಅತಿಶಯವಾಗಿ ಮರ್ಯಾದೆ ಮಾಡಿದ. ಯಾದವನಿಗೆ ಹೊಟ್ಟೆಯೊಳಗೆ ಕಿಚ್ಚಿದ್ದರೂ ಶಿಷ್ಯನಿಂದ ಮರ್ಯಾದೆ ಉಳಿಯಿತಲ್ಲಾ ಎಂಬ ಜಂಬ. ತನಗಿಂತ ಆಚಾರ್ಯರದೇ ಮಹಿಮೆ ಹೆಚ್ಚಾಯಿತೆಂಬ ಸಂಕಟವೇನೋ ಕಡಿಯುತಿತ್ತು.

ಆದರೂ ಅಧ್ಯಯನ ಮೊದಲಿನಂತೆ ಸಾಗಿತು. 'ಸರ್ವಂ ಖಲ್ವಿದಂ ಬ್ರಹ್ಮ'—(ಛಾಂದೋಗ್ಯ ೩. ೧೪–೧.) 'ನೇಹನಾ ನಾಸ್ತಿ ಕಿಂಚನ.'–(ಬೃಹದಾರಣ್ಯಕ ೬.೪–೧೯.) ಎಂಬ ವಾಕ್ಯಗಳ ಪ್ರಸ್ತಾಪಬಂತು. ಇರುವುದೆಲ್ಲ, ಈ ಜಗತ್ತೆಲ್ಲ ಬ್ರಹ್ಮ ಎಂದು ಯಾದವನ ಮತ. ಜಗತ್ತಿನಲಿ ಕಾಣಬರುವ ಎಲ್ಲ ಅನೇಕತ್ವ, ಭಿನ್ನತೆಯೂ ಕೇವಲ ಕಾಲ್ಪನಿಕ. ಅದು ಜಗತ್ತಿನ ಗುಣವೇ ಅಲ್ಲ ಎಂದು ಅವನ ಅರ್ಥ. ಆಚಾರ್ಯರಿಗೆ ಎಂದಿನಂತೆ ಇದು ಸರಿದೋರಲಿಲ್ಲ. "ಜಗತ್ತು ಬ್ರಹ್ಮವೂ ಅಲ್ಲ. ಕಾಲ್ಪನಿಕವೂ ಅಲ್ಲ. ಇದೆಲ್ಲ ಬ್ರಹ್ಮವೆಂಬುದರ ಭಾವ ಇದೆಲ್ಲ ಈಶಾವಾಸ್ಯ, ಬ್ರಹ್ಮಮಯ ಎಂದು. ಈಶ್ವರನಿಂದಲ್ಲದೆ ಜಗತ್ತಿಗೆ ಸ್ವಂತ ಅಸ್ತಿತ್ವವೇ ಇಲ್ಲ. ಅವನನುಳಿದು ಜಗತ್ತಿಲ್ಲ. ಅವನೇ ಅದರ ಬಿತ್ತು. ಅವನು ಮನಸು ಮಾಡಿದರೆ ಜಗತ್ತು. ಇಲ್ಲದಿರಲು ಇಲ್ಲ. ಅವನೇ ಸೃಷ್ಟಿಯ ಕರ್ತ. ಸ್ಥಿತಿಗೂ ಅವನೇ. ಲಯವೂ ಅವನಿಂದಲೇ–ಎಂದು ಅದರ ಭಾವ. ಇನ್ನು ಜಗದೊಳಗೆ ಕಾಣುವ ಭಿನ್ನತೆ ಕಾಲ್ಪನಿಕವಲ್ಲ; ಜಗತ್ತಿನ ಗುಣ. ಆದರೆ ಜಗತ್ತಿನ ಈ ಎಲ್ಲ ಅನೇಕತೆಯ ಆಧಾರ ಈಶ್ವರನ ಏಕತ್ವ. ಹಾಗೆ

ತಿಳಿಯದೆ ಜಗತ್ತಿನ ನಾನಾತ್ವವು ಈಶ್ವರನ ಏಕತ್ವದಿಂದ ಬೇರೆಯೆಂದು ತಿಳಿಯುವುದು ತಪ್ಪು ಹಾದಿ. ಇರುವುದೊಬ್ಬನೇ ದೇವ. 'ಏಕೋ ದೇವಃ' ಇಬ್ಬರೂ ಅಲ್ಲ ಸಾವಿರಾರೂ ಅಲ್ಲ. ಅವನೊಳಗೇ ಈ ಎಲ್ಲ ವಿಶ್ವ. ಇದು ಇನ್ನೊಂದು ವಾಕ್ಯದ ಭಾವ. ಮೇಲೆ ಮೇಲೆ ವ್ಯತ್ಯಾಸ ಗಳಿಗೆಡೆಯಾಗಿದ್ದರೂ ಜಗತ್ತಿಗೆ ನಿತ್ಯತೆಯಿದೆ. ಶೂನ್ಯಕ್ಕೂ ಅಸ್ತಿತ್ವಕ್ಕೂ ತಾಯಿಮಕ್ಕಳ ಬಳಗವಿಲ್ಲ. ಅಭಾವದಿಂದ ಭಾವ ಬೆಳೆಯದು. ಸುಳ್ಳು ನಿಜದ ಬಿತ್ತಲ್ಲ. ಜಗತ್ತು ಸತ್ಯವಿದೆ. ಏಕೋ ದೇವನಾದ ನಾರಾಯಣನೆ ಅದರ ಒಡೆಯ. ಅವನ ಮೈಯೇ ಜಗತ್ತು. ಎರಡೂ ವಾಕ್ಯಗಳು ಜಗತ್ತು ಸುಳ್ಳೆಂದು ಅರ್ಥ ಕೊಡುವುದೇ ಇಲ್ಲ. ಸತ್ಯವೆಂದೇ ಹೇಳುತಿವೆ'' ಎಂದು ಆಚಾರ್ಯರು ಬಿನ್ನಯಿಸಿದರು.

ಇಂಥ ಅದ್ವೈತ–ವಿಶಿಷ್ಟಾದ್ವೈತ ವಾದವು ಗುರು ಶಿಷ್ಯರಿಗೆ ದಿನವೂ ನಡೆಯುತಿತ್ತು. ಆದರೆ ಯಾದವನಿಗೆ ಅವು ಅಸಹ್ಯವಾಗಿರಲಿಲ್ಲ. ಈಗ ಬ್ರಹ್ಮರಾಕ್ಷಸನ ಪ್ರಸಂಗದ ದಿನದ ನೆನಪು ಹೊಸದಾಗಿ ಮನಸಿ ನೊಳಗೆ ಕಡಿಯುತಿತ್ತು. ಇತ್ತ ಯಾಮುನಾಚಾರ್ಯರು ಬೇಡಿದ ವರವೂ ಫಲಿಸುವ ಕಾಲಬಂತು. 'ನಿನಗೆ ಹೇಳಲು ನನಗೆ ಸರಿಯಲ್ಲ. ನಿನಗೆ ಬೇಕಾದ ಗುರುವ ನೀನು ಸೇರಬಹುದು' ಎಂದು ಯಾದವ ಹೇಳಿಬಿಟ್ಟ.

ಈ ಮೊಲದ ಕೋಡಿನ ವೇದಾಂತಿಯನು ಆಚಾರ್ಯರು ಬಿಟ್ಟುದು ಎಲ್ಲರಿಗೂ ಬೇಕಿತ್ತು. ಮನೆಗೆ ಹೋಗಿ ತಾಯಿಗೆ ನಡೆದುದನೆಲ್ಲ ತಿಳಿಸಿದರು. ಕಾಂತಿಮತೀದೇವಿ—'ಸಾಕಪ್ಪ ಅಧ್ಯಯನ. ಕಾಂಚೀ ಪೂರ್ಣರ ಬಳಿಗೆ ಹೋಗು. ಆತನ ಮೇಲೆ ವರದರಾಜನ ಅನುಗ್ರಹ ಬಹಳ. ಆತನನಾಶ್ರಯಿಸು. ಅದರಿಂದ ನಿನಗೆ ಒಳಿತಾಗುವುದು!' ಎಂದಳು. ಕೂಡಲೆ ಆಚಾರ್ಯರು ಕಾಂಚೀಪೂರ್ಣರನು ಕಂಡು ಅವರ ಅಪ್ಪಣೆ ಯನು ಕೇಳಿದರು. ಲಕ್ಷ್ಮಣನೊಮ್ಮೆ ಶ್ರೀರಾಮಚಂದ್ರನನು ಕೇಳಿದ ನಂತೆ—'ಇಂಥದನು ಮಾಡೆನ್ನು ಅಣ್ಣಯ್ಯ, ನಿನ್ನ ಊಳಿಗದವ ನಾ ಸಿದ್ಧನಿರುವೆ.' ಹೆಚ್ಚು ಕಡಿಮೆ ಆಚಾರ್ಯರದೂ ಅಂಥದೇ ಭಾವ. ಅಂಥವೇ ಮಾತೂ ಆಡಿರಬಹುದು. ಶಾಲಕೂಪದ ತೀರ್ಥ ವರವ

ರಾಜನಿಗೆ ಪ್ರಿಯವೆಂದೂ ದಿನವೂ ತಿರುವಾರಾಧನೆಗೆ ಅದನು ಅಣಿಮಾಡ ಬೇಕೆಂದೂ ಅಪ್ಪಣೆಯಾಯಿತು. ತೀರ್ಥ ಕೈಂಕರ್ಯನಿರತರಾಗಿ ಆಚಾರ್ಯರು ಸಂತುಷ್ಟರಾಗಿದ್ದರು.

---

೫

ಯಾಮುನಾಚಾರ್ಯರಿಗೆ ಆಚಾರ್ಯರ ತೀರ್ಥ ಕೈಂಕರ್ಯದ ಸುದ್ದಿ ಹತ್ತಿತು. ಸಂತುಷ್ಟರಾಗಿ ಬೇಡಿದ ವರವ ನೀಡಿದನೆಂದು ವರದ ರಾಜನಿಗೆ ಒಳಗೊಳಗೆ ನಮಿಸಿದರು. ಅಂತರಂಗ ಶಿಷ್ಯ ಮಹಾಪೂರ್ಣ ರನು ಕರೆದು ಗಳಿಗೆಯೂ ತಡೆಮಾಡದೆ ಹೋಗಿ ಆಚಾರ್ಯರನು ಕರೆತಾರ ಹೇಳಿದರು. ಶ್ರೀರಾಮನ ನೋಡ ಬಯಸಿದ ಸೀತೆಯ ಕುತೂಹಲ ಯಾಮುನ ಮುನಿಗೆ.

ಮಹಾಪೂರ್ಣರು ಕಂಚಿಗೆ ಹೊರಡುವಾಗಲೇ ಯಾಮುನಾ ಚಾರ್ಯರಿಗೆ ಮೈಯಲ್ಲಿ ಆಲಸ್ಯ. ಮುಪ್ಪಿನ ಕಾಲ. ಮೈಯೊಳಗೆ ಕಾಯಿಲೆ. ಮೈಯೆಂಬ ಮಣ್ಣಿನ ಮನೆ ಮುರಿದು ಬಿದ್ದೀತೆಂದು ಬಗೆದು ಯಾಮುನಾಚಾರ್ಯರು ಶಿಷ್ಯರನೆಲ್ಲ ಹತ್ತಿರ ಕರೆದರು. ಕಟ್ಟಕಡೆಯ ಕೆಲವು ಮಾತು ಹೇಳಿದರು. 'ಮುಮುಕ್ಷು ಮಂಡಲಿಯೆ! ಶ್ರೀ ರಂಗೇಶನ ದೇವಾಲಯವೆ ನಿಮ್ಮ ಜೀವ ಜೀವಾಳವಾಗಿರಲಿ. ಅಲ್ಲಿ ನೆಲೆಸಿರುವ ಶ್ರೀರಂಗನಾಥನೇ ನಿಮ್ಮ ರಕ್ಷಕನೆಂದು ತಿಳಿಯಿರಿ. ಆ ಭಗವಂತನಿಗೆ ಪ್ರೀತಿಯ ಭಕ್ತನಾದ ತಿರುಪ್ಪಾಣಿಯಾಳ್ವಾರೇ ನಿಮ್ಮ ಡಾರಿಯ ದೇವತೆಯಾಗಲಿ. ಮಕ್ಕಳಿರ! ಸರ್ವಸ್ವವನು ದೇವರ ಅಡಿಯಲಿ ಅರ್ಪಿಸಿದವನೇ ಪ್ರಸನ್ನ. ಅನನ್ಯ ಗತಿಯೇ ಶರಣಾಗತಿಯೇ ಪ್ರಪತ್ತಿ. ಎಲ್ಲವನು ದೇವರಾಯನ ಕೈಯೊಳಗೆ ಕೊಟ್ಟು ಕಿಂಕರನು ನಾನೆಂಬ ವನು ದೇವರಾಯನ ರಕ್ಷಣೆಯೊಳಗೆ ತನಗೆ ಸುಖವುಂಟೋ ಇಲ್ಲವೋ ಎಂದು ಚಿಂತಿಸಿದರೆ ಅವನು ಕಿಂಕರನಲ್ಲ. ಮೈಯಿದು ಕರ್ಮವೆಂಬ ನಾಯಿಯ ಬಾಲ. ಕರ್ಮ ಮುಗಿದಂದೇ ಮೈಯ ಅಳಿವು. ಮೈಯಂದೇ ಆಗಲಿ, ಮನಸಿನದೇ ಆಗಲಿ ಮೋಕ್ಷದ್ದೇ ಆಗಲಿ ಎಲ್ಲ ಚಿಂತೆಯನು

ಬಿಟ್ಟು ಕೇವಲ ಭಗವಚ್ಚಿಂತೆಯಲಿ ನಿರತನಾದವನೇ ಪ್ರಪನ್ನ. ಅವನೇ ಶ್ರೀವೈಷ್ಣವ. ಶ್ರೀಮನ್ನಾರಾಯಣನ ನಾಮವೇ ಎಲ್ಲ ಜ್ಞಾನ ವಿಜ್ಞಾನದ ಹುಟ್ಟು. ಆ ನಾಮವನು ಸದಾ ನೆನೆಯಿರಿ. ಆ ಜೇನನು ಸವಿಯಿರಿ. ದೇವ ನಮ್ಮೊಳಗೆ; ನಾವು ದೇವನೊಳಗೆ ಎಂಬುದೇ ಆ ನಾಮದ ಭಾವ. ನಮ್ಮ ಜೀವ ಅವನು. ನಮ್ಮ ಆಟ ಊಟ ಅವನು. ನಮ್ಮ ಜೀವಾಳ ಅವನು. ಅವನು ನಮ್ಮೊಳಗೆ ಇರುವುದರಿಂದಲೇ ನಮ್ಮ ಮೇಲೆ ಅವನಿಗೆ ಕರುಣೆ. ಅವನೊಳಗೆ ನಾವಿರುವೆವೆಂದೇ ನಮ್ಮ ಯೋಗಕ್ಷೇಮ ಆತನಿಗೆ ಹೊಂದಿದುದು. ಈ ಭರವಸೆಯಿಲ್ಲದಿರಲು ಒಳಿತಲ್ಲ. ಅವನು ಮಾಡುವ ಆನಂದದ ಮಹಾಹೋಮದಲಿ ನಾವು ಒಂದು ಸಮಿತ್ತು ಮಾತ್ರ. ಅವನ ದಿವ್ಯ ಗಾನದಲಿ ನಾವು ಒಂದು ಸ್ವರ ಮಾತ್ರ. ಅವನೀದೊಡ್ಡ ಅರಮನೆಯೊಳಗೆ ನಾವು ಊಳಿಗದವರು ಮಾತ್ರ. ನಮ್ಮದೆಂಬ ಕೆಲಸವಾಗಲಿ ನಮ್ಮದೆಂಬ ಹುಲ್ಲುಕಡ್ಡಿಯಾಗಲಿ ಇಲ್ಲ. ಎಲ್ಲಾ ಅವನ ಮನೆಗೆಲಸ. ಅವನ ಮನೆಯೂಳಿಗದವರು ನಾವು. ಅವನ ಕೈಂಕರ್ಯವೇ ನಮ್ಮ ಸಂತೋಷ; ನಮ್ಮ ಧರ್ಮ. ನಾವೇ ಅವನ ಸೊತ್ತು. ತಿರುಮಂತ್ರವೇ ನಿಮ್ಮ ಭೋಗಭೂಮಿಯಾಗಲಿ. ಚರಮ ಶ್ಲೋಕವೇ ನಿಮ್ಮ ಪುಷ್ಪವಾಗಲಿ. ದ್ವಯಾ ಮಂತ್ರವೇ ನಿಮ್ಮ ತ್ಯಾಗ ದೇವಿಯಾಗಲಿ. ಭಗವಂತನಿಗೂ ಭಾಗವತರಿಗೂ ಭೇದವಿಲ್ಲ. ಭಾಗವತ ರೊಳಗೆ ಭಗವಂತನೇ ನಲಿಯುತ್ತಿರುವ. ಯಾರಿಗಾದರೊಂದು ಸಹಾಯ ಮಾಡಿದರೆ ನೀವು ಮಾಡಿದಿರೆನ್ನದಿರಿ. ನಿಮ್ಮ ಗುರುಗಳದು ಆ ಬಹುಮಾನ. ಭಗವತ್ಸೇವೆ ಮಾಡುವಾಗ ಆ ಸೇವೆ ಪುರಾತನಾಚಾರ್ಯರ ಅನುಗ್ರಹವೆಂದು ತಿಳಿಯಿರಿ. ಯಾರಿಗೇ ಆಗಲಿ ಎಂಥದೇ ಆಗಲಿ ದಾನ ಮಾಡುವಾಗ ಫಲಾಪೇಕ್ಷೆಯಿಲ್ಲದಿರಲಿ. ಆಚಾರ್ಯನಿಗೆ ಇಂಥ ಕಾಮ ವಿದ್ದರೆ, ಭಾಗವತ ಮಂಡಲಿಯ ನಡುವೆ ತಾನೇ ಉತ್ತಮನೆಂಬ ಹೆಮ್ಮೆಗೆಡೆಕೊಟ್ಟರೆ ಆ ಆಚಾರ್ಯನಿಂದ ಉಪಯೋಗವಿಲ್ಲ. ಭಗವಂತ, ಭಾಗವತ, ಆಚಾರ್ಯ—ಇವರು ಮೂವರೇ ಪೂಜೆಯ ಮೂರ್ತಿಗಳು ಭಗವದ್ಭಾಗವತರ ಭಾವಗಳೆರಡೂ ಆಚಾರ್ಯರಲ್ಲಿ ಕೇಂದ್ರೀಕೃತವಾಗಿವೆ. ಆಚಾರ್ಯನು ಭಗವಂತನೂ ನಿಜ; ಭಾಗವತನೂ ನಿಜ. ಆಚಾರಾ

ಶ್ರಯುವೇ ನಿಮ್ಮ ಚರಮೋಪಾಯ. ಆಚಾರ್ಯಾನುಗ್ರಹವೇ ನಿಮ್ಮ ಭವಾರ್ಣವ ನೌಕೆ. ಶ್ರೀರಂಗೇಶನ ಧ್ಯಾನವು ನಿಲ್ಲದಿರಲಿ. ದಿನವೂ ಬೆಳಿಗ್ಗೆ ನಾಲ್ಕು ಹೂವನ್ನು ದೇವರ ಅಡಿಯಲ್ಲಿ ತಂದಿಟ್ಟರೂ ಸಾಕು.'

ಕಡೆಯ ಸಲ ಶ್ರೀರಂಗೇಶನನು ನೋಡುವ ಬಯಕೆಯಾಯಿತೋ ಏನೋ ಯಾಮುನ ಮುನಿಗೆ. ಬೇನೆಯಲ್ಲೇ ದೇವಾಲಯಕ್ಕೆ ಹೊರಟರು. ಆಚಾರ್ಯರಿಗೆ ಆಯಾಸವಾಗದಂತೆ ಶಿಷ್ಯ ವೃಂದವು ಮೆಲಮೆಲನೆ ನಡೆಯಿತು. ಗುಡಿಗೆ ಬರುವ ಹೊತ್ತಿಗೆ ಜನರೆಲ್ಲ ಗುಂಪುಗೂಡಿದರು. ಗುಡಿ ಹಿಡಿಸದಾಯಿತು. ಯಾಮುನ ಮುನಿ ಕೈಜೋಡಿಸಿಕೊಂಡು ಗಂಭೀರ ಮುದ್ರೆಯಿಂದ ರಂಗೇಶನ ಮುಂದೆ ನಿಂತಿದ್ದರು. ಕಣ್ಣು ಗಳಿಂದ ಆನಂದಬಾಷ್ಪ ಹರಿಯುತಿತ್ತು. ಮುಖದಲಿ ಅಲೌಕಿಕ ತೇಜ. ಬಾಯ ಕೊನೆಯಲಿ ಭುವನಮೋಹಕವಾದ ನಗೆ. ಮೈ ಗಾಳಿ ನಿಂತ ಮರದ ಎಲೆಗಳಂತೆ ನಿಶ್ಚಲ. ಕಣ್ಣಿನ ಎವೆಗಳು ಆಡುತಿರಲಿಲ್ಲ. ರಂಗೇಶನ ಶಶಿಕೋಟಿವಿನಿಂದಿತ ಅಸದೃಶ ರೂಪವನು ಅವರು ನೋಡುತ್ತಿದ್ದರೊ ಏನೋ! ರಂಗೇಶನೊಡನೆ ಮಾತು ಕತೆಯೇನೋ! ತುಟಿ ಅಲುಗಾಡುತಿತ್ತು. 'ಇದೇನು! ದೇವಗಣದ ನಡುವೆ. ಇದು ಸ್ವರ್ಗ ವೇನು?' ಎಂದು ಭಾವಾವಿಷ್ಟರಾಗಿಯೇ ಯಾಮುನ ಮುನಿ ನುಡಿ ದರು. ಅವರ ಬಾಯಿಂದ ಈ ಮಾತು ಹೊರಡುತಿದ್ದಂತೆಯೇ ರಂಗೇಶನ ಕೊರಲಿಂದ ಹೂವಿನ ಹಾರವು ಜಾರಿ ಕೆಳಗೆ ಬಿತ್ತು. ಹತ್ತಿರಿದ್ದವರು ಅದನು ಯಾಮುನ ಮುನಿಯ ಕೊರಲಿಗೆ ಹಾಕಿದರು. ರಂಗೇಶನು ಯಾಮುನ ಮುನಿ ಬೇಡಿದ ವರವ ನೀಡಿದನೇನೊ! ಹೂಮಾಲೆಯ ನೇನೊ ನೀಡಿದ.

ತೀರ್ಥ ಪ್ರಸಾದಗಳಕೊಂಡು ಎಲ್ಲರೂ ಆಶ್ರಮಕ್ಕೆ ಹಿಂದಿರುಗಿ ದರು. ಮಹಾಪೂರ್ಣರೂ ಆಚಾರ್ಯರೂ ಬಂದಿರಲಿಲ್ಲ. ಈಗಿನ ಪಯಣ ಗಳಂತೆ ಒಂದು ದಿನದ ರೈಲು ಮೋಟಾರು ಪಯಣಗಳಲ್ಲ ಆಗ. ನಡೆದೇ ಹೋಗಬೇಕಾಗಿತ್ತು. ಕಂಚಿಗೆ ಹೋಗಿಬರುವುದು ಅಷ್ಟು ಬೇಗ ಸಾಧ್ಯವಿರಲಿಲ್ಲ. ಯಾಮುನ ಮುನಿಗಳಿಗೇನೊ ಅಶಕ್ತಿ ಹೆಚ್ಚಿತು.

ಶಿಷ್ಯರನ್ನೆಲ್ಲ ಕರೆದು ಯಾರಿಗಾದರೂ ತಮ್ಮಿಂದ ಅಪರಾಧವಾಗಿದ್ದರೆ ಕ್ಷಮಿಸಬೇಡಿದರು. ಶಿಷ್ಯರಾವಿಸಯಕ್ಕೆ ಬೆರಗಾಗಿ 'ತಮ್ಮಿಂದ ಅಪರಾಧವೆ' ಎಂದಳುತಳುತ ಹೇಳಿದರು. ಅಭಿಜಿನ್ಮುಹೂರ್ತ ಬಂತು. ಶ್ರವಣ ನಕ್ಷತ್ರ. ವೈಯಾಸಿಯ ಆರನೆ ದಿನ. ಯಾಮುನ ಮುನಿಗಳದನು ತಿಳಿದು ಪದ್ಮಾಸನಸ್ಥಿತರಾಗಿ ಸ್ವೀಯಾಚಾರ್ಯರ ನೆನೆದು ಧ್ಯಾನಮಗ್ನ ರಾದರು. ಶಿಷ್ಯ ವೃಂದವು ಬ್ರಹ್ಮವಲ್ಲಿ, ಭೃಗುವಲ್ಲಿ, ಪುರುಷಸೂಕ್ತ, ಅರ್ಚಿರಾದಿ, ತಿರುವಾಯ್ಮೊಳಿಗಳನು ಉಚ್ಚಸ್ವರದಲಿ ಗಂಭೀರವಾಗಿ ಹೇಳುತಿತ್ತು. ಹೊರಗಡೆ ಮಂಗಲವಾದ್ಯವಾಯಿತು. ಆನಂದ ಕೋಲಾಹಲದ ನಡುವೆ ಯಾಮುನಮುನಿ ನಿತ್ಯ ವಿಭೂತಿಯ ಸಾರಿದರು. ಶರಣರ ಮರಣದ ರೀತಿಯೂ ಆನಂದಮಯ!

ಇತ್ತ ಮಹಾಪೂರ್ಣರು ಕಂಚಿಗೆ ಬಂದು ಕಾಂಚೀಪೂರ್ಣರನು ಕಂಡು ಬಂದ ಸುದ್ದಿ ಹೇಳಿದರು. ಆಚಾರ್ಯರು ಶಾಲಕೂಪಕೆ ಹೋದ ರೆಂದು ಕಾಂಚೀಪೂರ್ಣರು ಹೇಳಲು ಮಹಾಪೂರ್ಣರೂ ಅತ್ತ ನಡೆದರು. ಹೋಗುತ ಯಾಮುನ ಮುನಿ ವಿರಚಿತ ಸ್ತೋತ್ರವನು ಹೇಳುತಿದ್ದರು ಗಂಭೀರವಾದ ದನಿಯಿಂದ:—

ಸ್ವಾಭಾವಿಕಾನವಧಿಕಾತಿಶಯೇಶಿತೃತ್ವಂ ನಾರಾಯಣ ತ್ವಯಿ ನಮೃಷ್ಯತಿ ವೈದಿಕಃ ಕಃ।
ಬ್ರಹ್ಮಾ ಶಿವಶ್ಶತಮಖಃ ಪರಮಸ್ವರಾಡಿತ್ಯೇತೇಪಿ ಯಸ್ಯ ಮಹಿಮಾರ್ಣವ ವಿಪ್ರುಷಸ್ತೇ ॥

ಆಚಾರ್ಯರು ತಿರುಮಂಜನಕೆ ತೀರ್ಥ ತರುತಿದ್ದವರು ಇದನು ಕೇಳಿದರು. ಮೊದಲೇ ಭಕ್ತಿಯಿಂದ ತುಂಬಿ ತುಳುಕುತಿದ್ದ ಹೃದಯ. ಭಾಗವತೋತ್ತಮನು ತನ್ನ ಸಲ್ಮೆಯ ಭಗವಂತನ ಕೀರ್ತಿಯ ಹೊಗಳಿದ ಸ್ತೋತ್ರ. ಆಚಾರ್ಯರಿಗೆ ಮನಸು ನಿಲ್ಲಲಿಲ್ಲ. 'ಭಗವನ್, ಈ ಶ್ಲೋಕ ವೆಲ್ಲಿಯದು? ಇದರ ಕರ್ತರು ಯಾರು?' ಎಂದು ಮಹಾಪೂರ್ಣರನು ಕೇಳಿದರು. 'ಇಂಥ ಶ್ಲೋಕ ಮತ್ತಾರದು. ನಮ್ಮ ಸದ್ಗುರು ಯಾಮುನ ಮುನಿಗಳದು' ಎಂದು ಮಹಾಪೂರ್ಣರಂದರು. ಆಚಾರ್ಯರು ಮೊದಲೇ ಮುನಿಗಳ ಮಹಿಮೆಯ ಕೇಳಿದ್ದರು. ಈಗ ಅವರನು ನೋಡುವ ಬಯಕೆಯಾಯಿತು. ಮಹಾಪೂರ್ಣರಿಗೆ ಅದನು ತಿಳಿಸಿದರು.

ಬೇಡದೆಯೆ ಇಂಗಿತವರಿತು ನೀಡಿದರೆ ಯಾರಿಗೆ ಸಂತಸವಿರದು? ಬಯಸಿದ ಪಥ್ಯವನೆ ಹೇಳಿದರೆ ರೋಗಿಗೆಷ್ಟು ಸಂತಸವಿರಬೇಡ. ಮಹಾಪೂರ್ಣರು ಸಂತಸದಿಂದ ಒಪ್ಪಿದರು. ಇಬ್ಬರೂ ಬಂದು ತಿರುಮಂಜನದ ತೀರ್ಥವನಿತ್ತು ವರದರಾಜನ ಅಪ್ಪಣೆಪಡೆದು ಕಾಂಚೀಪೂರ್ಣರನು ಕಂಡು ಕೂಡಲೆ ಶ್ರೀರಂಗಕೆ ಹೊರಟರು.

ಪಯಣ ಬೇಗ ಸಾಗಿತು. ಆದರೂ ಹೊತ್ತಿಗೆ ಬರಲಾಗಲಿಲ್ಲ. ಅವರು ಕಾವೇರೀ ತೀರಕೆ ಬರುವ ಹೊತ್ತಿಗೆ ಜನರೆಲ್ಲ ಗುಂಪುಗೂಡಿ ಯಾಮುನ ಮುನಿಯ ಶರೀರಕೆ ಕೊನೆಯ ಸಂಸ್ಕಾರವಮಾಡುತಿದ್ದರು. ಆಚಾರ್ಯರಿಗೆ ಇದು ತಿಳಿಯಿತು. ಬುಡ ಕಡಿದ ಮರದಂತೆ ತಟ್ಟನೆ ನೆಲಕುರುಳಿಬಿದ್ದರು. ಆ ದಿವ್ಯ ಜೀವಿಗೆ ಎಷ್ಟು ದುಃಖವಾಯಿತೋ!

ಮಹಾಪೂರ್ಣರು ಆಚಾರ್ಯರಿಗೆ ಸಮಾಧಾನ ಹೇಳಿದರು. ಮುನಿಗಳ ಚರಮವಿಗ್ರಹವನಾದರೂ ನೋಡಲು ಭಾಗ್ಯವಿತ್ತಲ್ಲ. ಅದೇ ಸಾವಿರ ಪಾಲು—ಎಂದು ಇಬ್ಬರೂ ಸಮಾಧಾನಗೊಂಡರು. ಮುನಿಗಳ ವಿಗ್ರಹದ ಬಳಿಗೆ ಹೋಗಿ ಆಚಾರ್ಯರು ಕಣ್ಣುತುಂಬ ಅದನು ನೋಡಿದರು. ಮುನಿಗಳ ಬಲಗೈಯ ಮೂರು ಬೆರಳುಗಳು ಮಡಿಚಿಕೊಂಡಿದ್ದವು. ಯಾರಿಗೂ ಅದು ಗಮನಕೆ ಬಂದೇ ಇರಲಿಲ್ಲ. ಇದೇನೆಂದು ಕೇಳಲು ಎಲ್ಲರೂ ಬೆರಗಾಗಿ ಅತ್ತ ನೋಡಿದರು. ಯಾರಿಗೂ ಈ ವಿಚಿತ್ರದ ಅರ್ಥವಾಗಲಿಲ್ಲ. ಆಚಾರ್ಯರು ಸ್ವಲ್ಪ ಯೋಚಿಸಿ ಮುನಿಗಳಿಗೆ ಏನಾದರೂ ಬಯಕೆಗಳಿತ್ತೇ—ಎಂದಾದರೂ ಆ ಮಾತು ಹೇಳಿದ್ದರೇ—ಎಂದು ಕೇಳಿದರು. ಅಂಥವೇನೂ ಇಲ್ಲ. ಆದರೆ ಆಗಾಗ, ವ್ಯಾಸ ಪರಾಶರರಿಗೆ ನಮ್ಮ ಕೃತಜ್ಞತೆ ತೋರಿಸಬೇಕಾಗಿದೆ; ವಿಶಿಷ್ಟಾದ್ವೈತವ ಪ್ರತಿಪಾದಿಸುವ ಬ್ರಹ್ಮಸೂತ್ರ ವ್ಯಾಖ್ಯಾನವ ಬರೆಯಬೇಕು; ನಮ್ಮಾಳ್ವಾರರಿಗೆ ನಮ್ಮ ಪ್ರೀತಿಯ ಕಾಣಿಕೆಯನಿನ್ನೂ ಸಲ್ಲಿಸಿಲ್ಲ—ಎನುತಿದ್ದರು—ಎಂದು ಕೆಲವರಂದರು. 'ಹಾಗಾದರೆ, ಭಗವನ್! ನಿಮ್ಮ ಬಯಕೆಗಳನೆಲ್ಲ ತೀರಿಸುವೆ. ದಾಸನ ಮೇಲೆ ಕೃಪೆದೋರಬೇಕು. ಇದೇ ನನ್ನ ಪ್ರತಿಜ್ಞೆ!! ಎಂದು ಆಚಾರ್ಯರು ಗಟ್ಟಿಯಾಗಿ ಹೇಳಿದರು. ಅದೇನು ಮಾಯೆಯೋ'

ಒಡನೆ ಬೆರಳು ನೆಟ್ಟಗಾದವು. ಈ ಪ್ರತಿಜ್ಞಾತ್ರಯವೂ ಯಾಮುನಾಂಗುಲಿ ವಿಮೋಚನೆಯೂ ಅಲ್ಲಿದ್ದವರಿಗೆಲ್ಲ ಅರ್ಥವಾಗದ ವಿಸ್ಮಯವಾಯಿತು. 'ಯಾಮುನ ಮುನಿಗಳ ಕೃಪೆ ನಿಮ್ಮ ಮೇಲೆ ಪೂರ್ಣವಾಗಿದೆ. ಅವರ ಅಲೌಕಿಕ ಶಕ್ತಿಯನು ಅವರು ನಮಗೆ ನೀಡಿರುವುದು ನಿಜ. ಅವರ ಪೂಜ್ಯ ಪೀಠಕೆ ನೀವೇ ಅರ್ಹರು. ಯಾಮುನ ಮುನಿಗಳಿಗಾದರೂ ಅದೇ ಆಶೆಯಿದ್ದಿರಬೇಕು. ನೀವೇ ಆ ಪೀಠವನಲಂಕರಿಸಿ ನಮ್ಮನೆಲ್ಲ ಸಲಹಬೇಕು' ಎಂದು ಶ್ರೀವೈಷ್ಣವ ಮಂಡಲಿಯೆಲ್ಲ ಒಂದೇ ದನಿಯಿಂದ ಕೂಗುತ್ತ ಆಚಾರ್ಯರನು ಸುತ್ತುಗಟ್ಟಿತು. ಆಚಾರ್ಯರು ಏನೂ ಮಾತಾಡದೆ ಮುನಿಗಳ ಚರಮ ಕೈಂಕರ್ಯವನು ನೆರವೇರಿಸಿ, ಶ್ರೀರಂಗೇಶನ ಗುಡಿಗೆ ಹೋಗದೆಯೆ ಕಂಚಿಗೆ ಹಿಂದಿರುಗಿದರು. ಯಾಮುನಮುನಿಗಳನು ಜೀವಂತರಿರುವಾಗ ದರುಶನಮಾಡಿಕೊಳಲು ಅನುಗ್ರಹಿಸಲಿಲ್ಲೆಂದು ಶ್ರೀರಂಗೇಶನ ಮೇಲೆ ಕೋಪ ಆಚಾರ್ಯರಿಗೆ. ಸಾಧುಗಳೇ ಹಾಗೆ. ಅವರ ರಾಗ ದ್ವೇಷವೆಲ್ಲ ಭಗವಂತನೊಡನೆ; ಅವರ ಆಟಕೂಟವೆಲ್ಲ ಅವನೊಡನೆಯೇ.

ಆಚಾರ್ಯರೆನುತಿದ್ದರಂತೆ ಆಗಾಗ—'ಯಾಮುನಮುನಿಗಳ ಸನ್ನಿಧಿಯಲಿ ಒಂದೇ ದಿನ ಇದ್ದಿದ್ದರೂ ಸಾಕು. ಸ್ವರ್ಗಕೆ ಸೋಪಾನ ಕಟ್ಟುತಿದ್ದೆ ಎಲ್ಲರಿಗೂ ಹತ್ತಲಿಕ್ಕೆ. ಜಗತ್ತಿಗೆ ಜಗತ್ತೇ ಹತ್ತಿಸುತಿದ್ದೆ'—ಎಷ್ಟೋ ಖೇದದಿಂದೀಮಾತು ಅವರಾಡುತಿದ್ದರಂತೆ. ಆಚಾರ್ಯರ ವಿಶ್ವಪ್ರೇಮವಿನ್ನೆಂಥದೋ! ಮುನಿಗಳ ಮಹಿಮೆಯು ಆಳವೇನೋ!

---

೬

ಕಾಂಚೀಪೂರ್ಣರಿಗೆ ಈ ಸುದ್ದಿ ತಿಳಿಯಿತು. ಸ್ವಾಚಾರ್ಯವಿಯೋಗಕಾಗಿ ಅವರಿಗೆ ಬಲು ದುಃಖವಾಯಿತು. ಆದರೆ ಭಗವಾನನ ಆಟಕ್ಕೆ ಯಾರು ಹೊಣೆ? ದುಃಖವನು ನುಂಗಿ ತಮ್ಮ ಆಚಾರ್ಯರಿಗೆ

ತಾವು ನೆರವೇರಿಸಬೇಕಾಗಿದ್ದ ಶ್ರೀಚರ್ಣ ಪರಿಪಾಲನೆಯನ್ನು ರಾಮಾನುಜರಿಂದ ಮಾಡಿಸಿದರು.

ಯಾಮುನ ಮುನಿಗಳಂತರಿಸಿದರು. ಯಾದವನು ಬಿಟ್ಟ. ಕಾಂಚೀಪೂರ್ಣರೇ ಈಗ ಆಚಾರ್ಯರಿಗೆ ಅಂತರಂಗ ಮಿತ್ರರು. ಬರುಬರುತ ಆಚಾರ್ಯರಿಗೆ ಕಾಂಚೀಪೂರ್ಣರಲಿ ಭಕ್ತಿ ಗೌರವಗಳು ಹೆಚ್ಚಾದವು. ವರದರಾಜನು ಕಾಂಚೀಪೂರ್ಣರಿಗೆ ಪ್ರತ್ಯಕ್ಷವಾಗಿರುವನೆಂದು ಆಚಾರ್ಯರಿಗೆ ಮೊದಲೇ ಗೊತ್ತು. ಈಗ ಸ್ವಾಮಿ ಭೃತ್ಯರ ಗೆಳೆತನವೂ ಕಂಡು ಬಂತು. ಕೊನೆಗೆ ಕಾಂಚೀಪೂರ್ಣರನೇ ತಮ್ಮ ಆಚಾರ್ಯರಾಗಿರಲು ಬೇಡಿದರು. ಕಾಂಚೀಪೂರ್ಣರದಕೊಪ್ಪಲಿಲ್ಲ. 'ರಾಮಾನುಜ! ನನಗೇನೋ ಯೋಗ್ಯತೆಯಿದೆ ಎಂದು ಹೀಗೇಕೆ ಕೇಳುವೆ. ನನಗಾ ಯೋಗ್ಯತೆಯಿಲ್ಲ. ನಾನು ವರದರಾಜನ ಸನ್ನಿಧಿಯ ಸೇವಕನು ಮಾತ್ರ. ಅವನ ಸೇವೆಯಲ್ಲದೆ ಬೇರೇನೂ ನಾನರಿಯೆ. ನೀನು ಸದ್ಬ್ರಾಹ್ಮಣ. ನಾನು ವೈಶ್ಯ. ಯೋಗಿಗಳಿಗೆ—ಆತ್ಮನಾಥನನು ಕಣ್ಣಲ್ಲಿ ಕಂಡವರಿಗೆ ವರ್ಣವಿಲ್ಲೆಂದು ನೀನನ್ನುವೆ. ಬಲ್ಲೆ. ಅಂಥವರು ಅವರ್ಣರು ನಿಜ. ಆದರೂ ಅದು ಕೇವಲ ಆಧ್ಯಾತ್ಮರೀತಿಯ ಬಾಂಧವ್ಯಕೆ ಅನ್ವಯ. ಪ್ರಾಪಂಚಿಕ ರೀತಿಯಿಂದ ಅದು ತಪ್ಪಾದೀತು. ವರ್ಣಾಶ್ರಮ ಧರ್ಮಕೆ ವಿರೋಧವಾಗಿ ಸಾಮಾಜಿಕ ನಿಯಮಗಳ ಮುರಿದು ಪ್ರಪಂಚ ರೀತಿಯಲಿ ನಮ್ಮೊಳಗೆ ಗುರು ಶಿಷ್ಯ ಬಾಂಧವ್ಯ ಬೆಳೆಸುವುದು ಸರಿಯಲ್ಲ. ವ್ಯವಹಾರ ಧರ್ಮವನೂ ಗೌರವಿಸುವುದೇ ನನ್ನ ಮತ.' ಕಾಂಚೀಪೂರ್ಣರು ಒಪ್ಪಲಿಲ್ಲ.

ಆಚಾರ್ಯರಿಗೆ ಅದು ಮನಸಿಗೆ ಬರಲಿಲ್ಲ. ವರ್ಣಾಶ್ರಮದ ವ್ಯವಹಾರ ಧರ್ಮವ ಪಾಲಿಸೀಯ. ಕಾಂಚೀಪೂರ್ಣರಂಥ ನಿತ್ಯ ಮುಕ್ತರಿಗೂ ವರ್ಣಾಶ್ರಮದ ತೊಡಕೆ? ಆಚಾರ್ಯರಂತೂ ಧೈರ್ಯ ಮಾಡಿದರು. 'ನನ್ನ ಗುಡಿಸಿಲಿಗೆ ಬಂದು—ನನ್ನ ಆತಿಥ್ಯವ ಕೊಂಡು ನನ್ನ ಪಾವನಗೊಳಿಸಬೇಕು' ಎಂದು ಕಾಂಚೀಪೂರ್ಣರನು ಬೇಡಿದರು. ಅವರದಕೆ ಸಂಕೋಚದಿಂದ ಒಪ್ಪಿದರು. ಹೀಗಾದರೂ ಕಾಂಚೀಪೂರ್ಣರ ಪಾತ್ರ ಶೇಷವು (ಊಟಮಾಡಿ

ಉಳಿದುದು) ತಮಗೆ ಲಭಿಸೀತೆಂಬ ಆಸೆ ಆಚಾರ್ಯರದು. ಹೀಗಾದರೂ ಶಿಷ್ಯನಾಗುವ ಹಂಚಿಕೆ.* ಅತಿಥಿಗಾಗಿ ಮೃಷ್ಟಾನ್ನವ ಮಾಡುವಂತೆ ಮನೆಯೊಳಗೆ ಹೇಳಿ ಸ್ನಾನ ಸಂಧ್ಯಾದಿಗಳ ತೀರಿಸಿ ತೀರ್ಥ ಕೈಂಕರ್ಯಕೆಂದು ವರದನ ಸನ್ನಿಧಿಗೆ ಹೋದರು. ಬರುವ ಹೊತ್ತಿಗೆ ಅಡಿಗೆ ಸಿದ್ಧವಾಗಿತ್ತು. ಅತಿಥಿಯನು ಕರೆತರಲು ಆಚಾರ್ಯರು ಹೋದರು. ಇತ್ತ ಕಾಂಚೀಪೂರ್ಣರು ಮೊದಲೇ ವರದನ ಸನ್ನಿಧಿಗೆ ಹೋಗಿ ನಮಸ್ಕರಿಸಿ ಆಚಾರ್ಯರ ಮನೆಗೆ ಹೊರಟುಬಂದಿದ್ದರು. ಆಚಾರ್ಯರು ದಕ್ಷಿಣದ ದಾರಿಯಲಿ ಹೋದರೆ ಇವರು ಉತ್ತರದ ಹಾದಿಯಿಂದ ಕೂಡಲೇ ಬಂದರು. ತಪ್ಪು ಗಂಟಾಯಿತು. ಬಂದವರು ಆಚಾರ್ಯರು ಮನೆಯೊಳಗಿಲ್ಲದುದ ನೋಡಿ ಕಾಂಚೀಪೂರ್ಣರು 'ಅವಸರದ ಕೆಲಸವಿದೆ. ಅವರು ಬರುವವರೆಗೆ ತಡೆಯಲು ಸಾಧ್ಯವಿಲ್ಲ'ವೆಂದು ಆಚಾರ್ಯರ ಹೆಂಡತಿಗೆ ಹೇಳಿ ಊಟಮಾಡಿ ಹೊರಟುಹೋದರು. ಶೂದ್ರನ ಎಂಜಲೆಂದು ಆಕೆ ಅದನು ಯಾರಿಂದಲೋ ತೆಗೆಸಿ ಶುದ್ಧಿ ಮಾಡಿಸಿದಳು. ತಾನೂ ಸಚೇಲ ಸ್ನಾನ ಮಾಡಿದಳು. ಆಚಾರ್ಯರೂ ಕಾಂಚೀಪೂರ್ಣರನು ಕಾಣದೆ ಬಂದರು. ನಡೆದ ಸಂಗತಿ ತಿಳಿಯಿತು. ಹೂಡಿದ ಹಂಚಿಕೆ ಹುಸಿಯಾಗಲು ಬಹಳ ಕೋಪ ಬಂತು. 'ಎಲ್ಲಾ ಹಾಳು ಮಾಡಿಬಿಟ್ಟಿ' ಎಂದು ಹೆಂಡತಿಯ ಮೇಲೆ ಸಿಟ್ಟಾದರು.

ಮತ್ತೆ ಕಾಂಚೀಪೂರ್ಣರ ಮನೆಗೆ ಹೋದರು. ಏನುಮಾಡಲಿ? ವ್ಯವಹಾರಧರ್ಮವ ಮುರಿಯಬಾರದೆಂದೇ ವರದನ ಅಪ್ಪಣೆಯಾದಂತಿದೆ. ಆಯಿತು. ಅವನ ಅಪ್ಪಣೆಯಂತೇ ಆಗಲಿ. ಹೀಗೆ ಆಚಾರ್ಯರ ಮನಸಿ-

---

* ಕಬೀರದಾಸನೂ ಹೀಗೇ ಯುಕ್ತಿಯಿಂದ ರಾಮಾನಂದ ಸನ್ಯಾಸಿಯ ಶಿಷ್ಯತ್ವ ಸಾಧಿಸಿದನಂತೆ. ಅವರೂ ಬೇಡೆಂದರು. ಆಗ ಕಬೀರದಾಸನು ರಾಮಾನಂದರು ಸ್ನಾನಕ್ಕೆ ಹೋಗುವ ದಾರಿಯಲಿ ಮಲಗಿದ. ಬೆಳಗಿನಜಾವ; ಕತ್ತಲು. ಮಲಗಿದ್ದವನನು ಕಾಣದೆ ಎಡವಿದರು ಸನ್ಯಾಸಿಗಳು. ಕಾಲಿಗೆ ಮನುಷ್ಯ ದೇಹದ ಸ್ಪರ್ಶವಾದಂತಾಗಿ 'ರಾಮ ರಾಮ' ಎಂದು ಅಂದರು. ಕೂಡಲೆ ಕಬೀರನೆದ್ದು ಕಾಲಿಗೆ ಬಿದ್ದು 'ನನಗೆ ಮಂತ್ರೋಪದೇಶವಾಯಿತು. ಪಾದಧೂಳಿ ನನ್ನ ತಲೆಯ ಮೇಲೆ ಬಿತ್ತು. ನಾನಿನ್ನು ನಿಮ್ಮ ಶಿಷ್ಯ' ಎಂದು ನಕ್ಕನಂತೆ. ಗುರುಗಳೂ ಅವನ ಭಕ್ತಿಗೆ ಮೆಚ್ಚಿ ಸ್ವೀಕರಿಸಿದರಂತೆ ಶಿಷ್ಯನಾಗಿ.

ನೊಳಗೆ ಯೋಚನೆ ಹರಿದಿತ್ತು. ಕಾಂಚೀಪೂರ್ಣರನು ಕಂಡು 'ಭಗವನ್! ನಿಮ್ಮ ಮನಸಿಗೆ ಬಾರದುದನು ಮಾಡಿಸಬೇಕೆಂದು ಬಯಸಿದ ನನ್ನ ಅಪರಾಧವನು ಮನ್ನಿಸಬೇಕು. ವರದರಾಜ ಸ್ವಾಮಿಯ ಮುಂದೆ ನನ್ನ ಸಂಶಯಗಳಿಗೆ ಉತ್ತರವನು ಕೇಳಿ ನನ್ನ ಮೇಲೆ ಕೃಪೆ ಮಾಡಬೇಕು' ಎಂದು ಬೇಡಿದರು. ಕಾಂಚೀಪೂರ್ಣರು ವರದರಾಜನಿಗೆ ಅಂತರಂಗ ಭಕ್ತರು. ವರದರಾಜನು ಅವರೊಡನೆ ಪ್ರತ್ಯಕ್ಷವಾಗಿ ಮಾತಾಡುತಿದ್ದ. ಅಂದು ರಾತ್ರಿ ದೇವಾಲಯದ ಎಲ್ಲ ಕೆಲಸಗಳು ಮುಗಿದ ಮೇಲೆ ಧ್ಯಾನಸ್ಥರಾಗಿ ದೇವರ ಮುಂದೆ ನಿಂತರು. 'ಏನೋ ನಿನ್ನ ಮನಸಿನೊಳಗಿದೆ, ಏನು?' ವರದರಾಜ ಭಕ್ತನನು ಕೇಳಿದ. 'ರಾಮಾನುಜನಿಗೇನೋ ಸಂದೇಹಗಳಿವೆಯಂತೆ, ಅವನಿಗೆ ಸಮಾಧಾನಗಳನು ಹೇಳಬೇಕು.' ಕಾಂಚೀಪೂರ್ಣರು ಹೇಳಿದರು. 'ನನಗವು ಗೊತ್ತು. ರಾಮಾನುಜನು ಆಗರ್ಭಪ್ರಪನ್ನ. ಅವನ ಮನಸಿನ ಆರು ಸಂದೇಹಗಳಿಗೂ ಈ ಉತ್ತರ ಹೇಳು.' ಸ್ವಾಮಿ ಪ್ರೀತಿಯಿಂದ ಹೇಳಿದ:—

> ಅಹಮೇವ ಪರಂಬ್ರಹ್ಮ ಜಗತ್ಕಾರಣ ಕಾರಣಂ |
> ಕ್ಷೇತ್ರಜ್ಞೇಶ್ವರಯೋರ್ಭೇದಸ್ಸಿದ್ಧಏವ ಮಹಾಮತೇ |
> ಮೋಕ್ಷೋಪಾಯೋ ನ್ಯಾಸಏವ ಜನಾನಾಂ ಮುಕ್ತಿಮಿಚ್ಛತಾಂ |
> ಮದ್ಭಕ್ತಾನಾಂ ಜನಾನಾಂಚ ನಾಂತಿಮಸ್ಮೃತಿರಿಷ್ಯತೇ |
> ದೇಹಾವಸಾನೇನಭಕ್ತಾನಾಂ ದದಾಮಿ ಪರಮಂ ಪದಂ |
> ಪೂರ್ಣಾಚಾರ್ಯಂ ಮಹಾತ್ಮಾನಂ ಸಮಾಶ್ರಯ ಗುಣಾಶ್ರಯಂ |
> ಇತಿ ರಾಮಾನುಜಾರ್ಯಾಯ ಮಯೋಕ್ತಂ,ವದ ಸತ್ವರಃ || *

ಆಗಲೇ ಕಾಂಚೀಪೂರ್ಣರು ಆಚಾರ್ಯರಿಗೆ ಇದನೆಲ್ಲ ತಿಳಿಸಿದರು. ಆಚಾರ್ಯರು ಬಹಳ ಹರುಷಗೊಂಡು ವರದನ ಅಪ್ಪಣೆಯಂತೆ ಮಹಾಪೂರ್ಣರನಾಶ್ರಯಿಸಲು ಶ್ರೀರಂಗಕೆ ಮರುದಿನವೇ ಹೊರಟರು.

ಅತ್ತ ಶ್ರೀರಂಗದೊಳಗೆ ಶ್ರೀವೈಷ್ಣವಬೃಂದವು ಮಹಾಪೂರ್ಣರನು ನುತ್ತಿ ಹೇಗಾದರೂ ಮಾಡಿ ಆಚಾರ್ಯರನು ಶ್ರೀರಂಗಕೆ ಕರೆತರಬೇಕೆಂದು

---

* ಮೂಲ ಸಂವಾದವು ಶ್ಲೋಕರೂಪವೆಂದು ಹೇಳಲು ಸಾಧ್ಯವಿಲ್ಲ. ಉತ್ತರಗಳು ಮಾತ್ರ ಆಮೇಲೆ ಶ್ಲೋಕದಲ್ಲಿ ಸೇರಿಸಲ್ಪಟ್ಟಿವೆ.

ಕೇಳಿದರು. ಮಹಾಪೂರ್ಣರದಕ್ಕೊಪ್ಪಿ ಭಗವದ್ಭಾಗವತರ ಅಪ್ಪಣೆಪಡೆದು ಕಂಚಿಯ ಕಡೆಗೆ ಬಂದರು. ಅವರ ಹೆಂಡತಿಯೂ ಜೆತೆಯೊಳಗೆ ಬಂದಳು. ಇಬ್ಬರೂ ಪಯಣಮಾಡಿ ಮಧುರಾಂತಕವೆಂಬ ಗ್ರಾಮದ ಬಳಿಗೆ ಬಂದರು. ಅಲ್ಲಿ ಆಚಾರ್‍ಯರು ಎದುರಿಗೆ ಬಂದರು. ಆಚಾರ್‍ಯರಿಗಾದ ಹರುಷ ಹೇಳಲು ಬಾರದು. ಗುಡ್ಡದ ಬಳಿಗೆಂದು ತಾನೇ ಹೊರಟಿರಲು ಗುಡ್ಡವೇ ತನ್ನ ಬಳಿಗೆ ಬಂದರೆ ಹೇಗಿರಬೇಡ ! ಮಹಾಪೂರ್ಣರಿಗೂ ಬಂಡ ಕೆಲಸ ಅರ್ಧ ಹಾದಿಯಲ್ಲೇ ಆಗಿ ಸಂತೋಷ ಅತಿಶಯವಾಯಿತು. ಆಗಲೇ ಆಚಾರ್‍ಯರು ಮಹಾಪೂರ್ಣರನು ಕೂಡಲೇ ಪಂಚಸಂಸ್ಕಾರ ಗಳ ದಯೆಮಾಡಿ ದಾಸನಂತೆ ತಮ್ಮನು ಸೇರಿಸಿಕೊಳಲು ಬೇಡಿದರು. ಕಂಚಿಗೆ ಮಧುರಾಂತಕವು ಒಂದೇ ದಿನದ ಪಯಣ. ಅಲ್ಲಿಗೇ ಹೋಗಿ ವರದನ ಸನ್ನಿಧಿಯಲೇ ನಡೆಸಿದರಾಯಿತೆಂದು ಮಹಾಪೂರ್ಣರಂದರು. ಆಚಾರ್‍ಯರಿಗೆ ಅವಸರ. ಶುಭಕೆ ಗಳಿಗೆಯೂ ತಡಮಾಡಬಾರದೆಂದು ಅನುಭವಕೆ ಬಂದಿತ್ತು. ಯಾಮುನ ಮುನಿಗಳ ನಿರ‍್ಯಾಣದ ಪಾಠ ಇನ್ನೂ ಮನಸಿನಿಂದ ಅಳಿಸಿರಲಿಲ್ಲ. 'ಮಾನವನು ಗಳಿಗೆಯ ನೀರು ಗುಳ್ಳೆ. ಈ ಗಳಿಗೆಯದು ಮುಂದಿನ ಗಳಿಗೆಗೆ ಇರುವುದು ನಂಬಿಗೆ ಯಿಲ್ಲ. ಗಾಳಿ ಬಂದಾಗ ತೂರುವುದೇ ಗುಣ. ದಾಸನ ಮೇಲೆ ಕೃಪೆ ತೋರಬೇಕು'—ಎಂದು ಬೇಡಿದರು. ಆಗಲೆಂದು ಒಪ್ಪಿ ಅಲ್ಲೇ ಕೋದಂಡರಾಮಸ್ವಾಮಿಯ ಸನ್ನಿಧಿಯಲಿ ಸುದರ್ಶನ ಹೋಮ ಮಾಡಿಸಿ ಮಹಾಪೂರ್ಣರು ಆಚಾರ್‍ಯರಿಗೆ ಪಂಚ ಸಂಸ್ಕಾರಗಳನು ಮಾಡಿ ದ್ವಯವನುಪದೇಶಿಸಿದರು. ಸಂಜೆಯಲ್ಲೇ ಕಳೆದು ಮರುದಿನ ಬೆಳಗ್ಗೆ ರಾಮನ ಅಪ್ಪಣೆ ಪಡೆದು ಎಲ್ಲರೂ ಕಂಚಿಗೆ ಬಂದರು.

---

೭

ಕಂಚಿಗೆ ಬಂದಮೇಲೆ ಆಚಾರ್‍ಯರ ಮನೆಯೊಳಗೇ ಅರ್ಧಭಾಗ ದಲಿ ಮಹಾಪೂರ್ಣರ ವಾಸ. ಸದಾ ಸದ್ಗುರು ಸೇವೆ ದೊರೆಯಲೆಂದೇ ಆಚಾರ್‍ಯರು ಹೀಗೆ ಮಾಡಿದುದು. ಸದ್ಗುರು ಕೃಪೆಯಿಂದ ಶ್ರೀವೈಷ್ಣವ

ಗ್ರಂಥ ರಹಸ್ಯಗಳೆಲ್ಲ ಆಚಾರ್ಯರಿಗೆ ತಿಳಿದವು. ಕಾಲಕ್ಷೇಪವು ಆನಂದ ಮಯವಾಗಿ ನಡೆಯುತ್ತಿತ್ತು.

ಆಚಾರ್ಯರಿಗೆ ಆ ಆನಂದವನು ತೊಡಕಿಲ್ಲದೆ ಅನುಭವಿಸಲಾಗಲಿಲ್ಲ. ಅವರ ಹೆಂಡತಿಗೆ ಸ್ವಲ್ಪ ಛಾಸಸ. ಜತೆಗೆ ಅಜ್ಞಾನ. ಪತಿಹೃದಯವನು ತಿಳಿಯುವ ಜಾಣ್ಮೆ ಆಕೆಗೆ ಇರಲಿಲ್ಲ. ಹೀಗಾಗಿ ಏನಾದರೊಂದು ತೊಡಕು ಆಗಾಗ ತಗಲುತ್ತಿತ್ತು. ಒಂದು ದಿನ ಆಚಾರ್ಯರು ಎಣ್ಣೆ ಯೊತ್ತಿಸಿಕೊಳುತ್ತಿದ್ದರು. ಎಣ್ಣೆಯೊತ್ತುತ್ತಿದ್ದ ಹುಡುಗನಿಗೆ ಹಸಿವೆ ಯಾಗಿತ್ತು. ಹೆಂಡತಿಯನು ಕರೆದು ತಂಗಳನ್ನವೇನಾದರೂ ಮಿಕ್ಕಿದೆಯೇ ಎಂದು ವಿಚಾರಿಸಿದರು. 'ಒಂದಗಳಿನಷ್ಟೂ ಇಲ್ಲ' ಎಂದುತ್ತರ ಬಂತು. ಆಕೆಯ ಮಾತು ಆಚಾರ್ಯರಿಗೆ ನಂಬಿಗೆಯಾಗಲಿಲ್ಲ. ಎದ್ದು ಒಳಗೆ ಹೋಗಿ ನೋಡಿದರು, ತಪ್ಪಲೆಯೊಳಗೆ ಅನ್ನವಿತ್ತು. ತಪ್ಪಲೆಯ ತಂದು ಅವನಿಗೆ ಕೊಟ್ಟು ಆಕೆಯನು ಬೈದರು. 'ಹಸಿವುಗೊಂಡ ಜೀವಿಯೊಂದು ಅನ್ನ ಬೇಡಿದರೆ ಸುಳ್ಳು ಹೇಳಿದೆಯಾ? ಹಸಿದು ಬಂದವರಿಗೆ ಅಶನನೀಡದ ಪಾಪಕಿಂತ ಬೇರುಂಟೆ? ಸುಳ್ಳಿಗೆ ನೀಚತನ ಜತೆ' ಎಂದು ಗದರಿಸಿದರು.

ಮತ್ತೊಂದು ದಿನ ಬೆಳಗ್ಗೆ ಆಚಾರ್ಯರು ಹೊರಗೆ ಹೋಗಿದ್ದರು. ಮನೆಯ ಹಿಂದಿನ ಬಾವಿಗೆ ಆಚಾರ್ಯರ ಹೆಂಡತಿ ನೀರಿಗೆ ಹೋದಳು. ಮಹಾಪೂರ್ಣರ ಹೆಂಡತಿಯೂ ನೀರಿಗೆ ಬಂದಳು. ಇಬ್ಬರೂ ಒಂದೇ ಸಲ ಬೇರೆ ಬೇರೆ ಗಾಲಿಗಳ ಮೇಲೆ ನೀರು ಸೇದಿದರು. ಸೇದುವಾಗ ಮಹಾಪೂರ್ಣರ ಹೆಂಡತಿಯ ಕೊಡದ ನೀರು ಆಚಾರ್ಯರ ಹೆಂಡತಿಯ ಕೊಡದ ಮೇಲೆ ಎರಡು ಹನಿ ಸಿಡಿಯಿತೋ ಏನೋ. ಆಕೆಗೆ ಸಿಟ್ಟು ಬಂತು. ಚಿಕ್ಕದು ದೊಡ್ಡದು ಎಂಬ ಭೇದ ತಿಳಿಯದೆ ಮಡಿ ಮೈಲಿಗೆ ನಡೆಸದ ಬಡಹೆಂಗಸಿನ ಕೊಡದ ನೀರು ಈ ಪಂಡಿತ ಪತ್ನಿಯ ಆಚಾರ ವಂತ ಕೊಡದ ಮೇಲೆ ಸಿಡಿಯಬಹುದೇ? ಇಬ್ಬರಿಗೂ ಜಗಳ ಹತ್ತಿತು. ಇಬ್ಬರೂ ಬೈದರು. ಇಬ್ಬರೂ ಆಣೆಯಿಟ್ಟರು. ಇದೆಲ್ಲ ಮಹಾ ಪೂರ್ಣರು ಮನೆಯೊಳಗಿಂದ ನೋಡುತಲೇ ಇದ್ದರು. ಹೆಂಡತಿ ಮನೆಗೆ ಬಂದೊಡನೆ ಆಕೆಯನ್ನು ದಂಡಿಸಿ, ಇನ್ನಿಲ್ಲಿರಬಾರದೆಂದು ಶ್ರೀರಂಗಕೆ ಹೊರಟುಹೋದರು.

ಆಚಾರ್ಯರು ಮನೆಗೆ ಬಂದವರು ಸದ್ಗುರುವು ಮನೆಯಲ್ಲಿಲ್ಲದಿರುವುದ ನೋಡಿ ನೆರೆಯವರನು ಕೇಳಿದರು. ನಡೆದ ಸಂಗತಿ ಗೊತ್ತಾಯಿತು. ಆಚಾರ್ಯರ ಕೋಪಕ್ಕೆ ಮೇರೆಯೇ ಇರಲಿಲ್ಲ. ಕಾಂಚೀಪೂರ್ಣರನು ಮನೆಗೆ ಕರೆದು ಅವರ ಪಾತ್ರಶೇಷವನುಣ್ಣಬೇಕೆಂದಾಗ ಆ ಮಹಾನು ಭಾವನನು ಕೀಳು ಕುರಿಯಂತೆ ಕಂಡಳು. ಅದನ್ನು ಮನ್ನಿಸಿತು. ಮರಳಿ ಹಸಿದು ನಿಂತವನಿಗೆ ಅನ್ನನೀಡೆಂದಾಗ ಕೀಳುತನದ ಸುಳ್ಳು ಹೇಳಿದಳು. ಅದೂ ಮನ್ನಿಸಿಯಾಯಿತು. ಈಗ ಸದ್ಗುರುವಿನ ಹೆಂಡತಿಗೇ ಅವಮಾನ. ಇನ್ನೀ ಕಡುಮೂರ್ಖತನಕೆ ಮನ್ನಣೆ ಹೇಗೆ ದೊರೆಯ ಬೇಕು. ಈ ಅಪರಾಧತ್ರಯದ ಭಾರದಿಂದ ಆಚಾರ್ಯರ ಹೃದಯ ಬಹಳ ಕುಗ್ಗಿತು. ಹೆಂಡತಿಯನು ಕರೆದು ಹೇಳಿದರು. 'ನಿನ್ನ ಹೃದಯದಂಥ ಕತ್ತಲು ಕೋಣೆಯಿರಲಾರದು. ತಿಳಿವಿನ ಗುರುತೇ ಇಲ್ಲ ನಿನಗೆ. ನಿನ್ನಂಥವಳಿಗೆ ಬೇಕಾದುದೆಲ್ಲ ಇಲ್ಲಿದೆ. ಇದೋ ಈ ಹಣವೆಲ್ಲ ನಿನ್ನದು. ತೆಗೆದುಕೊಂಡು ನಿನ್ನ ತಂದೆಯ ಮನೆಗೆ ಹೋಗು. ಮನೆಯೆಂದರೆ ಪರದೇಶಿಗಳ ಸತ್ರವಾಗಿರಬೇಕು. ಅತಿಥಿ ಸೇವಾ ಸದನವೇ ಮನೆ. ಹಾಗಲ್ಲದ ಮನೆಯೇಕೆ ? ಮನೆತನವೇಕೆ ? ಹೋಗು. ಸಂಸಾರದಲಿ ಸವಿಯಿಲ್ಲದಾಗಲು ಸನ್ಯಾಸಿಯಾಗುವುದೇ ಸರಿಯೆಂದು ಹಿರಿಯರು ಹೇಳಿರುವರು. ಹೋಗು. ನಾನಿನ್ನು ಸಂಸಾರದಲಿರ ಲೊಲ್ಲೆ' ಎಂದು ಹೇಳಿ ಆಕೆಯನು ತವರೂರಿಗೆ ಕಳಿಸಿದರು.

ಸಾಧು ಸಂತರ ಬಗೆಯೇ ಹೀಗೆ. ಜಗದ ಬಗೆಗಳ ಬೇಗೆ ಅವರಿಗೆ ಸೈಸದು. ಬುದ್ಧಿ ಬೆಳೆಯುತಲೆ ಸಂಸಾರವು ಅವರಿಗೆ ಮೀನಿಗೆ ನೆಲ ವಿದ್ದಂತೆ. ಸ್ವಲ್ಪ ಆತ್ಮಬಲವು ಮೊಳೆತರೆ ಸಾಕು ಸಂಸಾರದಿಂದ ಹರಿದೋಡಿ ಬಿಡುವರು. ಗಳಿಗೆಯೂ ತಡವಿಲ್ಲ. ಆಚಾರ್ಯರು ಹುಟ್ಟಾ ಮುಕ್ತಜೀವಿ. ಅವರ ಜೀವನವೀದಾರಿಗೊಂಡು ಹರಿದುದು ನಿಸರ್ಗ ಸಹಜವೇ.

ಅನಂತ ಸರೋವರವು ಬಹಳ ಮಹಿಮೆಯದು. ಅಲ್ಲಿ ಸ್ನಾನ ಮಾಡಿದರೆ ಎಲ್ಲಾ ಪಾಪ ಹರಿವುದು ಎಂದು ಆಗಿನವರ ನಂಬಿಗೆ.




ಆಚಾರ್ಯರು ಅನಂತ ಸರಸ್ಸಿನೊಳಗೆ ಸ್ನಾನ ಮಾಡಿ ಸನ್ಯಾಸ ತೆಗೆದುಕೊಳಲು ಸಂಕಲ್ಪ ಮಾಡಿದರು. ಯಾರಿಂದ ಸನ್ಯಾಸ ಹೊಂದಬೇಕೆಂಬ ಯೋಚನೆ ಬಂತು. ಯಾಮುನ ಮುನಿಗಳು ಇಲ್ಲ. ಮಹಾಪೂರ್ಣರು ಶ್ರೀರಂಗಕೆ ಹೋದರು. ಅವರನ್ನು ಕರೆಯಿಸುವುದೆಂದರೆ ಕಾಲವಿಳಂಬ. ಕಾಲ ತಪ್ಪಿದರೆ ಕಾಲಕೂಟವಾದೀತೆಂದು ಆಚಾರ್ಯರಿಗೆ ಹಿಂದೆಯೇ ಪಾಠವಾಗಿತ್ತು. ಕಡೆಗೆ ಶ್ರೀ ವರದರಾಜನಿಂದಲೇ ಹೊಂದಬೇಕೆಂದು ನಿಶ್ಚಯಿಸಿದರು. ಸರಸಿನಲಿ ಸ್ನಾನ ಮಾಡಿ ಯಾಮುನ ಮುನಿಗಳ ಪಾದವ ನೆನೆದು, ವರದನ ಸನ್ನಿಧಿಗೆ ಹೋದರು. 'ವರದರಾಜ! ಭವತಾರಕ! ಸಾಕಿನ್ನು ನನಗೀ ಸಂಸಾರ. ಭೋಗ ಭಾಗ್ಯಗಳ ಆಸೆ ನನಗಿಲ್ಲ. ಬಂಧು ಬಳಗದ ಮೋಹವೆನಗಿಲ್ಲ. ನಿನ್ನ ಪಾದವಲ್ಲದೆ ನನಗಾವುದೂ ಬೇಡ. ಇನ್ನೀ ದೋಣಿಯುಲಿ ಜಗದ ಬಗೆಯ ನೀರು ತುಂಬಬೇಡಯ್ಯ. ದೋಣಿ ಮುಳುಗೀತು. ಮುದ್ದಾಗಿ ದೋಣಿಯುಲ್ಲಿ ಕುಳಿತು ನಡೆಸಯ್ಯ. ಭವದ ಕಡಲ ದಾಟಿಸಯ್ಯ. ನೀಡಯ್ಯ ಸನ್ಯಾಸವನೆನಗೆ ನೀಡು. ನೋಡಯ್ಯ ಕೃಪೆಯಿಂದೆನ್ನ ನೋಡು.' —ಆಚಾರ್ಯರು ಗದ್ಗದ ಕಂಠದಿಂದ ಬೇಡಿದರು. ಕಣ್ಣಿನಲಿ ಮುತ್ತಿನಂತೆ ನೀರು. ಮೊಗದ ಮೇಲೆ ಅಲೌಕಿಕ ತೇಜ. ಆಚಾರ್ಯರ ಮೂರ್ತಿ ಆಗ ಭುವನಮೋಹಕವಾಗಿತ್ತು.

ಕಾಂಚೀಪೂರ್ಣರಿಗೆ ವರದನ ಅಂತರಂಗಾನುಜ್ಞೆಯಾಯಿತು. 'ಕಾಷಾಯ ತ್ರಿದಂಡಧಾರಿಯಾಗಿ ನನ್ನ ರಾಮಾನುಜನು ನನ್ನ ಸೇವೆ ಮಾಡಲಿ' ಎಂತ. ಆಚಾರ್ಯರು ಕಾವಿಬಟ್ಟೆಯುಟ್ಟರು. ತ್ರಿದಂಡವ ಹಿಡಿದರು. ಊರಿನ ಜನರೆಲ್ಲ ಗುಂಪುಗೂಡಿ ಹರುಷದಿಂದ ಹೂಮಳೆಯನೇ ಕರೆದರು. ಮಂಗಳ ವಾದ್ಯಗಳ ಬಾರಿಸಿದರು. ಶ್ರೀವೈಷ್ಣವ ಬೃಂದವು ಸಂತಸದಿಂದ ವೇದ ಪಾರಾಯಣ ಮಾಡಿತು. ಹುಡುಗರು ಹಾಡಿ ಕುಣಿದರು. ಅಖಂಡ ವೈಭವದಿಂದ ಆಚಾರ್ಯರ ಸನ್ಯಾಸ ದೀಕ್ಷೆಯು ವರದನ ಸನ್ನಿಧಿಯುಲಿ ಸ್ವೀಕೃತವಾಯಿತು. ವರದರಾಜನ ಅನುಗ್ರಹದಂತೆ ಕಾಂಚೀಪೂರ್ಣರು ಆಚಾರ್ಯರನು "ಯತಿಶೇಖರ"ನೆಂದು ಕರೆದರು. ಯತಿರಾಜ, ಯತಿಶೇಖರ ಎಂದು ಜನರೆಲ್ಲ ಕೊಂಡಾ

ಡಿದರು. ಆಚಾರ್ಯರು ಯತಿರಾಜನೆಂಬ ಹೆಸರಿನಿಂದ ಸನ್ಯಾಸವ ಕೈಗೊಂಡು ದರ್ಶನಸ್ಥಾಪನ ದೀಕ್ಷೆ ವಹಿಸಿದಂದಿನಿಂದ ಊರಿಗೆ ಊರೇ ಯತಿರಾಜನ ಮಹಿಮೆಯ ಹೊಗಳುತಿತ್ತು.

ಜಯತಿ ಸಕಲ ವಿದ್ಯಾವಾಹಿನೀ ಜನ್ಮಶೈಲೋ ಜನಿಪದಪರಿವೃತ್ತಿಶ್ರಾಂತ
ವಿಶ್ರಾಂತಿ ಶಾಖೀ ।
ನಿಖಿಲ ಕುಮತಿ ಮಾಯಾ ಶರ್ವರೀ ಬಾಲಸೂರ್ಯೋ ನಿಗಮ ಜಲಧಿವೇಲಾ ಪೂರ್ಣ
ಚಂದ್ರೋ ಯತೀಂದ್ರಃ ॥
ಜಯ ಮಾಯಮತಾಂಧಕಾರಭಾನೋ ಜಯ ಬಾಹ್ಯಪ್ರಮುಖಾಟವೀ
ಕೃಶಾನೋ ।
ಜಯ ಸಂಶ್ರಿತಸಿಂಧುಶೀತಭಾನೋ ಜಯ ರಾಮಾನುಜ ಯಾದವಾದ್ರಿಶೃಂಗೇ ॥

---

## ೮

ಹೂ ಅರಳಿತು. ಪರಿಮಳವು ಗಾಳಿಯಲಾಡುತ ದೂರ ಹರಿದು ಹರಡಿತು. ಎಲ್ಲೆಲ್ಲಿಂದಲೂ ಭ್ರಮರಗಳು ಮಧುಪಾನಕೆಂದು ಬಂದವು. ಆ ಭ್ರಮರಗಳ ಆನಂದ ಅವಕೇ ಗೊತ್ತು. ಹೂವಿನ ಪರಿಮಳದ ಹರುಷ ದುಂಬಿಯೇ ಬಲ್ಲದು.

ಕೂರೇಶ ದಾಶರಥಿಗಳು ಆ ಮಧುಪಮಾಲೆಯ ಅರಸರು. ಕೂರೇಶ ನದು ಕೂರಂ ಎಂಬ ಹಳ್ಳಿ. ಕೂರಂದ ಒಡೆಯನವನು. ಅಂತೇ ಕೂರೇಶ ನೆಂಬ ಹೆಸರವನಿಗೆ. ಕೂರೇಶನು ಬಹಳ ಸಿರಿವಂತ. ಸಿರಿವಂತನಿದ್ದಂತೆ ಕೊಡಗೈಯ ದಾನಿಯೂ ಹೌದು. ಬಲು ದಯಾಳು, ದೀನ ಬಂಧು. ಮುಂಜಾವಿನಿಂದ ಸಂಜೆಯತನಕ ದಿನವೂ ಅವನ ಮನೆಯೊಳಗೆ ಕುಂಟ ರಿಗೆ, ಕುರುಡರಿಗೆ ಒಂದೇಸವನೆ ಅನ್ನ ಬಟ್ಟೆಗಳ ದಾನ ನಡೆದೇ ಇರು ತಿತ್ತು. "ಕುಂಟ ಕುರುಡರ ಕೂರೇಶ। ಬಡವ ಬಗ್ಗರ ಕೂರೇಶ" ಎಂದು ಲಾವಣಿಗಳನವನ ಮೇಲೆ ಕಟ್ಟಿ ಜನರು ಹಾಡಿ ಕೃತಜ್ಞತೆ ತೋರಿಸುವರು. ಆ ಬಡವರ ಬಂಧುವಿನ ಮನಸು ಬಲು ಸರಳ. ಅವನ ವಿಸಯ- ಬಡವರಿಗೂ ಇರದು. ಸ್ವಭಾವವೇ ಭಕ್ತಿವಂತ ಸ್ವಭಾವ. ಯತಿಶೇಖರನು ದೇವರಾಜನ ಸನ್ನಿಧಿಯಲಿ ಸನ್ಯಾಸಿಯಾದ ಸುದ್ದಿಯ

ಕೇಳಿ ಗಳಿಗೆಯೂ ತಡೆಯದೆ ಕಂಚಿಗೆ ಬಂದ. ಯತಿಶೇಖರನ ಕಂಡು ಪಾದಕೆ ಬಿದ್ದು ಪಂಚ ಸಂಸ್ಕಾರ ಮಾಡಿ ದಾಸ್ಯವ ಸ್ವೀಕರಿಸಬೇಕೆಂದು ಬೇಡಿದ. ಯತಿರಾಜನದಕೊಪ್ಪಿದ. ಕೂರೇಶನು ಯತಿರಾಜನ ಅಂತ ರಂಗದ ಗೆಳೆಯನಾಗಿ ಆಚಾರ್ಯ ಸೇವಾ ನಿರತನಾದ. ಪುರುಷಮಂಗಳದ ದಾಶರಥಿ ಯತೀಂದ್ರನ ಸೋದರಳಿಯ. ಹುಟ್ಟಾ ಹರಿಭಕ್ತಿ ತತ್ಪರ. ನಿಗರ್ವಿ. ಎಲ್ಲ ವೇದಶಾಸ್ತ್ರಗಳ ಓದಿದವ. ಸೋದರಮಾವ ಯತಿ ಯಾದುದ ಕೇಳಿ ಕಂಚಿಗೆ ಬಂದು ಯತಿರಾಜನ ಶಿಷ್ಯನಾದ. ಅವನೇ ಮಧುಪಗಳ ಮೊದಲಿಗ. ಅತ್ತಿಂದ ಇತ್ತಿಂದ ಎಷ್ಟೋ ಜನ ಬಂದು ಯತಿಪತಿಯನಾಶ್ರಯಿಸಿದರು. ಹೂವಿನ ಬಳಿಗೆ ದುಂಬಿಬಾರದೆ ಇದ್ದೀತೇ?

ಯತಿಪತಿಗೆ ಗೋವಿಂದಮಿಶ್ರನನು ಶ್ರೀವೈಷ್ಣವನ ಮಾಡಿ ಅವನಿಂದ ಹರಿಸೇವೆ ಮಾಡಿಸಬೇಕೆಂಬ ಆಸೆ. ಗೋವಿಂದನು ಮಾತ್ರ ಕಾಳಹಸ್ತಿಯ ಕಾಡಿನೊಳಗೆ ಸುತ್ತುತಿದ್ದ. ಅವನ ಶೈವ ದೀಕ್ಷೆಯು ಹೆಚ್ಚಿಹೋಗಿತ್ತು. ಯೋಗ್ಯರೆಂದು ಶ್ರೀಶೈಲಪೂರ್ಣರಿಗೆ ಕಾಳಹಸ್ತಿಗೆ ಹೋಗಿ ಗೋವಿಂದನನು ವೈಷ್ಣವನ ಮಾಡಿರೆಂದು ಬೇಡಿ ಕಾಗದ ಬರೆದರು. ಕೃಪಾಮಾತ್ರ ಪ್ರಸನ್ನಾರ್ಯನೆಂಬುದು ಬರಿಯ ಹೆಸರೆ? ಗುಣದ ಗುರುತಲ್ಲವೆ. ಯತಿರಾಜನ ತುಂಬಿ ತುಳುಕುವ ದಯಾ ಗುಣವು ಅವನ ಗುಣರತ್ನಗಳಲಿ ನಾಯಕಮಣಿ.

ಇತ್ತ ಯಾದವಪ್ರಕಾಶನಿಗೆ ಬಾಳುವೆಯಲಿ ಹೊಸದೊಂದು ಹಾಳೆ ತೆರೆಯುವ ಕಾಲ. ಬ್ರಹ್ಮರಾಕ್ಷಸನನು ಯತಿರಾಜನೋಡಿಸಿ ದಾಗಲೇ ಆ ಹಾಳೆ ತೆರೆಯಬೇಕಿತ್ತು. ಆದರೆ ಮನಸಿನ್ನೂ ಮೈಲಿಗೆ ತೊಳೆದಿರಲಿಲ್ಲ. ಈಗಾಕಾಲ ಬಂತು. ಅವನ ತಾಯಿ ಪರಮ ಸಾಧ್ವಿ ಕಾಂಚೀಪೂರ್ಣರನು ಚೆನ್ನಾಗಿ ಬಲ್ಲವಳು. ಯತಿರಾಜನ ಕಂಡು ಆ ಸುಧೆ ಯಂಥ ಮಾತು ಕುಡಿದು ಆಕೆಗೆ ವೈಷ್ಣವ ಧರ್ಮದ ಸೊಬಗು ತಿಳಿಯಿತು. ತನ್ನ ಮಗ ಯಾದವನೂ ಶ್ರೀವೈಷ್ಣವನಾದರೊಳಿತೆಂದು ಬಗೆದಳು. ಮಗನಿಗೆ ಆ ಮಾತು ಹೇಳಿದಳು. ಆ ಮಾತು ಆಕೆ ಅನ್ನುವಾಗ

ಯಾರೋ ಮಂತ್ರಪುಷ್ಪ ಹೇಳುತಿದ್ದವರು 'ತಥಾಸ್ತು' ಎಂದರು. ಕಾಕತಾಳೀಯ ನ್ಯಾಯ. ಆ ಸಾಧ್ವಿಗೆ ಬಲು ಸಂತಸವಾಯಿತು. ಯಾದವನೂ ಅದಕೊಪ್ಪಿದ. ಆದರೆ ಒಂದು ತೊಡಕು ಕಗ್ಗಂಟಾಯಿತು. ಯಾದವನು ಏಕದಂಡಿ ಸನ್ಯಾಸಿ. ಶಿಖಾಯಜ್ಞೋಪವೀತರಹಿತ. ಮರಳಿ ಅವನೀಗ ಧರಿಸುವುದೆಂದರೆ ಭೂಪ್ರದಕ್ಷಿಣೆ ಮಾಡಿ ಪ್ರಾಯಶ್ಚಿತ್ತ ಮಾಡಿ ಕೊಳಬೇಕು. ಈ ಅಪರವಯಸಿನಲಿ ಯಾದವನಿಗದು ಹೇಗೆ ಶಕ್ಯ? ಯಾದವನಿಗಿದಕೆ ದಾರಿಯೇ ತೋರಲಿಲ್ಲ. ಹಗಲಿರುಳು ಚಿಂತಿಸಿದ ಬಗೆಹರಿಯಲಿಲ್ಲ. ಕಡೆಗೊಂದು ದಿನ ವರದರಾಜನು ಕನಸಿನೊಳಗೆ ಕಾಣಿಸಿಕೊಂಡು ಭೂಪ್ರದಕ್ಷಿಣೆ ಅನವಶ್ಯಕವೆಂದೂ ಯತಿರಾಜನ ಪ್ರದಕ್ಷಿಣೆ ಮಾಡಿದರೆ ಸಾಕೆಂದೂ ಯಾದವನಿಗಪ್ಪಣೆ ಮಾಡಿದ. ಕನಸು ನಿಜವೆಂದು ಯಾದವನು ನಂಬಲಿಲ್ಲ. ನಂಬಿಗೆ ಸಾಲದೆ ಕಾಂಚೀಪೂರ್ಣರ ಬಳಿಗೆ ಹೋಗಿ ವರದರಾಜನ ಕೇಳಿ ತನಗೊಂದು ದಾರಿತೋರಿಸಬೇಕೆಂದು ಬೇಡಿದ. ಕನಸಿನೊಳಗೆ ಬಂದುದು ನಿಜವೆಂದೂ ಯತಿರಾಜನ ಶರಣು ಹೋಗುವುದೇ ಹಾದಿಯೆಂದೂ ಅಪ್ಪಣೆಯಾಯಿತು ದೇವರದು. ಒಡನೆಯೆ ಯಾದವನು ಯತೀಂದ್ರನ ಬಳಿಗೆ ಹೋಗಿ ಹಿಂದಿನ ತಪ್ಪಿಗೆಲ್ಲ ಮನ್ನಣೆ ಬೇಡಿ ತ್ರಿದಂಡ ಸನ್ಯಾಸವ ಬೇಡಿದ. ಅಲ್ಲಿದ್ದವರು ಭೂಪ್ರದಕ್ಷಿಣದ ಮಾತೆತ್ತಿದರು. ಮರುಮಾತಿಗೆ ಎಡೆಯಿರದಂತೆ ಯತೀಂದ್ರನಿಗೆ ಪ್ರದಕ್ಷಿಣಪೂರ್ವಕ ನಮಸ್ಕಾರಮಾಡಿ ಯಾದವನು ವರದರಾಜಸ್ವಾಮಿಯ ಅಪ್ಪಣೆಯ ತಿಳಿಸಿದ. ಯತಿರಾಜನು ತಟ್ಟನೆದ್ದು, ಯಾದವನಿಗೆ ವಂದನ ಮಾಡಿ ಮಗ್ಗುಲಲಿ ಕುಳ್ಳಿರಿಸಿ 'ಭಗವನ್, ಇಷ್ಟು ದಿನಕೆ ಈ ದೀನನ ಮೇಲೆ ದಯೆಬಂತೇ ನಿಮಗೆ' ಎಂದು ಆದರಿಸಿ, ಸನ್ಯಾಸವನಿತ್ತು ಗೋವಿಂದಜೀಯನೆಂಬ ಹೆಸರಿಟ್ಟ. ಭಕುತಿಯಿಂದ ಭಗವಂತನ ಹಲವರು ಸಾರಿದರೆ ದ್ವೇಷದಿಂದಲೂ ಕೆಲವರು ಸೇರಬಾರದೆ? ದೇವೇಶನ ದಯೆಯೊಂದಿರಲು ಬೇವು ಮಾವಾಗದೆ?

ಅಧಮಾಧಮರಲ್ಲೂ ಕೂಡ ಆತ್ಮವಿದೆ. ಅವರೇನು ಬರೀ ಕಲ್ಲು ಮಣ್ಣಲ್ಲ. ಅವರಲ್ಲೂ ದೈವೀಶಕ್ತಿಯಡಗಿದೆ. ಅತ್ಯಂತ ಪಾಪಿಗೂ ದೇವರ ಕಾಯುವ ಕೈ ಸದಾ ಕಾದೇಯಿದೆ. ದಾರಿಯೇ ಇಲ್ಲದ ಅಂಧಂತ

ಮದಲ್ಲಿ ಯಾರೂ ನಿಜವಾಗಿ ಬಿದ್ದಿಲ್ಲ. ಸಾಧು ಸಂತನೂ ಹಿಂದೆ ಪಾಪಿಯಾಗಿದ್ದು ಮುಕ್ತನಾದಂತೆಯೇ ಪಾಪಿಷ್ಠನೂ ಮುಂದೆ ಮುಕ್ತನಾಗಿ ಸಂತನಾಗುವನು. ಜಗತ್ತಿನ ಮಹಾಪುರುಷರ ಕೆಲಸವೇ ಅದು. ಪಾಪಿ ಮೂಢರಿಗೂ ಮುಂದೆ ಸಂತರಾಗುವಿರೆಂಬ ಧೈರ್ಯಕೊಡುವುದು. ಅವರೊಳಗಿನ ದೈವೀಶಕ್ತಿಯನು ಜಾಗ್ರುತಗೊಳಿಸುವುದು.

ಗೋವಿಂದಜೀಯನು ತ್ರಿದಂಡಿಯಾಗಿ ಬಲುದಿನ ಬಾಳಲಿಲ್ಲ. ವಯಸು ತುಂಬಿ ಪರಮಪದವನು ಬೇಗನೆ ಹೊಂದಿದ. "ಯತಿಧರ್ಮ ಸಮುಚ್ಚಯ" ಎಂಬುದೊಂದು ಆತನ ಗ್ರಂಥ. ಯತಿಶೇಖರನನಾಶ್ರಯಿಸಿದ ಮೇಲೆ ಬರೆದುದು. ಗೋವಿಂದಜೀಯನಿಗಾಗಿ ಯತಿಶೇಖರನೆಷ್ಟೋ ಗೋಳಿಟ್ಟನಂತೆ.

ಅತ್ತ ಶ್ರೀರಂಗದೊಳಗೂ ಯತಿಶೇಖರನ ಸನ್ಯಾಸ ವೈಭವದ ಸುದ್ದಿ ಹರಡಿತು. ಮಹಾಪೂರ್ಣಾದಿಗಳೆಲ್ಲ ಸೇರಿ ಯತಿರಾಜನನು ಯಾಮುನಾಚಾರ್ಯರ ಪದವಿಯಲಿ ನೆಲೆಗೊಳಿಸಬಯಸಿದರು. ಆದರೆ ಯಾಮುನ ಮುನಿಗಳ ನಿರ್ಯಾಣದ ಕಾಲದಲಿ ಯತಿರಾಜನಿಗೆ ರಂಗೇಶನ ಮೇಲೆ ಸಿಟ್ಟುಬಂದಿತ್ತು. ಶ್ರೀರಂಗಕೆ ಬಂದೂ ರಂಗೇಶನ ಸಂದರುಶನ ಪಡೆಯದೆ ಹಾಗೇ ಹಿಂದಿರುಗಿ ಹೋಗಿದ್ದ. ಈಗ ಹಾದಿಯೇನು? ಎಲ್ಲರೂ ಸೇರಿ ಶ್ರೀರಂಗೇಶನ ಬೇಡಿದರು. ವರದರಾಜನಿಗೊಂದು ಪತ್ರ ಕಳಿಸುವಂತೆ ರಂಗೇಶನ ಅಪ್ಪಣೆಯಾಯಿತು. 'ಜೀವವನು ಬೇಡಿದರೆ ನೀಡುವರೆ? ಯತಿರಾಜನೆನ್ನ ಜೀವಜೀವಾಳ' ಎಂದು ವರದನ ಉತ್ತರ ಬಂತು. ಶ್ರೀರಂಗದವರಿಗೆ ದೆಸೆ ತೋರದಂತಾಯಿತು. ಯತಿರಾಜನು ಶ್ರೀರಂಗಕೆ ಬರುವ ಬಗೆಯೇನು? ಕಡೆಗೆ ದೇವಗಾನ ನಾಟ್ಯಕಲಾ ನಿಪುಣನಾದ ರಂಗನಾಥ ಗಾಯಕನನು ಕರೆಯಿಸಿ ಗಾನ ನಿಪುಣತೆಯಿಂದ ವರದರಾಜನ ಮೆಚ್ಚಿಸಿ ಯತಿಶೇಖರನನೇ ವರವಾಗಿ ಪಡೆದು ಬರುವಂತೆ ಹೇಳಿ ಕಂಚಿಗೆ ಕಳಿಸಿದರು. ಭಾಗವತಾಜ್ಞೆಯೆಂದು ಶಿರದಲಿ ತಳೆದು ರಂಗನಾಥ ಗಾಯಕನು ಕಂಚಿಗೆ ಬಂದ. ಆಗ ಕರಿವರದನದೊಂದು ವಿಶೇಷ ಸೇವೆಯ ಉತ್ಸವ. ಆತನಿಗೆ ಮನಸು ಹಿಗ್ಗಿ ದೇವಗಾನವ

ಹಾಡಿದ. ಭಕ್ತ ಹಾಡಿದರೆ ದೇವರು ಕುಣಿಯುವನಂತೆ. ರಂಗನಾಥನಂಥ ಭಕ್ತ; ದೇವಗಾನ. ವರದನಿಗೆ ಮನಸು ಹೊಳೆಯಾಗಿ ಹರಿದು ಹೋಯಿತು. ಬಲು ಬೆಲೆಯ ರತ್ನಗಳ ರಂಗನಾಥನಿಗೆ ನೀಡುವಂತೆ ಕಾಂಚೀಪೂರ್ಣರಿಗೆ ಹೇಳಿದ. ಒಡನೆಯೆ ತಟ್ಟೆಯಲಿ ತಂದಿಟ್ಟರು. 'ನಾನಿದನೇನಮಾಡಲಿ? ದೇವಾ ನೀಡುವೆನೆಂದರೆ ಬೇಡುವೆನಯ್ಯ ಕೊಡಗೈಯ ಕರಿವರದ. ಇದು ನಾನೊಲ್ಲೆ' ಎಂದು ಮತ್ತೆ ಹಾಡಿದ. 'ಲಕ್ಷ್ಮಿ, ನಾನು—ಬಿಟ್ಟು ಬೇರೇನಾದರೂ ಕೇಳು. ಕೊಡುವೆ' ಎಂದು ವರದನನುಗ್ರಹಿಸಿದ.'ಯತಿರಾಜನ ರಂಗೇಶನ ಸನ್ನಿಧಿಸೇವೆಗೆ ಕಳಿಸಯ್ಯ ಹರಿಯೆ! ಇದೇ ನಾನು ಬೇಡಬಂದುದು' ಎಂದು ರಂಗನಾಥನು ಬಿನ್ನಯಿಸಿದ. 'ಕೆಟ್ಟಿತು ಕೆಲಸ. ಯತಿರಾಜನನು ಕೊಡಲಾರೆನೆಂದು ಮೊದಲೇ ಹೇಳದಿದ್ದುದು ಎಂಥ ಮೋಸವಾಯಿತು. ಬೇರೇನಾದರೂ ಬೇಡಬಾರದೇ' ವರದರಾಜನ ಮೋರೆಯಲಿ ತವಕ. 'ದೊರೆಯೆ, ಆಡಿದ ಮಾತಿಗೆ ಸಟೆಯಿಲ್ಲದವನೆಂದಲ್ಲವೆ ನಿನ್ನ ಬಿರುದು. ಆ ಕೀರ್ತಿಗೆ ಕಿಲುಬು ಹತ್ತದೆ? ರಂಗೇಶನ ಸೇವೆ ನಿನ್ನ ಸೇವೆಯಲ್ಲವೆ. ಕರುಣಿಸು ಕರುಣಿಸಯ್ಯ! ಎಂದು ರಂಗನಾಥನು ಮರಳಿ ಬೇಡಿದ. 'ಆಗಲಿ' ವರದರಾಜನ ದನಿಯಲಿ ಖಿನ್ನತೆ ಕಾಣುತಿತ್ತು. ಯತಿರಾಜನು ಮಾತಾಡಲಿಲ್ಲ. ವರದನಿಗೆ ಪ್ರಣಾಮಮಾಡಿ ಶ್ರೀರಂಗಕೆ ಒಡನೆಯೆ ಹೊರಟ. ಕೂರೇಶ ದಾಶರಥಿಗಳು ಯತಿರಾಜನ ಅರ್ಚಾವಿಗ್ರಹವೊಂದು ತೆಗೆದುಕೊಂಡು ಹಿಂದೆ ಹೊರಟರು. ಯತಿರಾಜನು ಕುಟೀರಕೂ ಹೋಗಲಿಲ್ಲ. ನೆಟ್ಟನೆ ಶ್ರೀರಂಗದ ಹಾದಿ ಹಿಡಿದ. ಸ್ವಲ್ಪದೂರ ಹೋಗಿ ಕೂರೇಶನು ಕಂಚಿಗೆ ಹಿಂದಿರುಗಿದ. ದಾಶರಥಿಯು ಮಾತ್ರ ಯತಿರಾಜನ ಹಿಂದೆ ಶ್ರೀರಂಗಕೆ ಹೋದ.

ಶ್ರೀರಂಗಕೆ ಬಂದರು. ಬಂದವರು ಕಾವೇರಿಯಲಿ ಮಿಂದು ದ್ವಾದಶೋರ್ಧ್ವ ಪುಂಡ್ರಗಳನು ಧರಿಸಿ ಸಂಧ್ಯಾದಿಗಳ ನೆರವೇರಿಸಿದರು. ಶ್ರೀರಂಗೇಶನ ಅಪ್ಪಣೆಯಂತೆ ಜನರೆಲ್ಲ ಎದುರು ಬಂದರು. ಛತ್ರ ಚಾಮರಗಳ ಬೀಸುತಿರಲು ಮಂಗಳತೂರ್ಯಧ್ವನಿಗಳು ಮೊಳಗುತಿರಲು ಯತಿರಾಜ ಶ್ರೀರಂಗವ ಪ್ರವೇಶಿಸಿದ. ದೇವಾಲಯವ ಹೊಕ್ಕು ಕೋಟಿಸೂರ್ಯ ಪ್ರಭಾ

ಭಾಸಮಾನನಾಗಿ ಶೇಷತಲ್ಪಶಾಯಿಯಾದ ಶ್ರೀರಂಗನಾಥನ ದರುಶಿಸಿ ಪ್ರಣಾಮಮಾಡಿದ. ರಂಗೇಶನು ಸುಪ್ರೀತನಾಗಿ ಯತಿರಾಜನಿಗೆ ಉಭಯ ವಿಭೂತಿ ನಾಯಕತ್ವವನು 'ಉಡಯವರ್' ಎಂಬ ಬಿರುದನು ನೀಡಿದ. ದರ್ಶನ ಸ್ಥಾಪನಾಚಾರ್ಯ ಪದವಿಯನೇರಿ ತನ್ನ ಸನ್ನಿಧಿಯಲೇ ಇರಬೇಕೆಂದು ಅಪ್ಪಣೆಮಾಡಿದ. ಯತಿರಾಜನು ಭಗವದಾಜ್ಞೆಯನು ಶಿರದೊಳಾಂತು ಶ್ರೀರಂಗದಲಿ ನೆಲೆಸಿದ.

ಇತ್ತ ಕೂರೇಶನು ಕಂಚಿಯಿಂದ ಸ್ವಗ್ರಾಮಕೆ ಬಂದ. ಒಂದು ದಿನ ರಾತ್ರಿ ಕೂರೇಶನ ಮನೆಯ ಹೆಬ್ಬಾಗಿಲ ಹಿತ್ತಾಳೆಯ ಕದಗಳನು ಕಸುವಿನಿಂದ ಮುಚ್ಚಿದರು. ಘಣಘಣ ಎಂದು ಸದ್ದು ಕಂಚಿಯವರೆಗೆ ಕೇಳಿಸಿತು. ಇದೇನು ಸದ್ದು ಎಂದು ಲಕ್ಷ್ಮಿ ವರದರಾಜನ ಕೇಳಿದಳಂತೆ. ಕೂರೇಶನ ವೈಭವದ ಕತೆಯ ಹೇಳಿದ ದೇವ. ಲಕ್ಷ್ಮಿಗೆ ಎಲ್ಲೂ ಇಲ್ಲದ ಬೆರಗು. ಅಂಥ ಮಹಾತ್ಮನಾದ ಕೂರೇಶನನು ನೋಡಬೇಕೆಂದು ಬಯಕೆ ಸಹಜವಾಗಿ ಹುಟ್ಟಿತು. ಸ್ವಾಮಿಗೆ ತಿಳಿಸಿದಳು. ಬೆಳಗಾದಮೇಲೆ ಕಾಂಚೀಪೂರ್ಣರನು ಕರೆಸಿ ಕೂರೇಶನನು ಸನ್ನಿಧಿಗೆ ಕರೆತರುವಂತೆ ಅಪ್ಪಣೆಮಾಡಿದ ವರದರಾಜ. ಕಾಂಚೀಪೂರ್ಣರು ಕೂರಕ್ಕೆ ಬಂದರು. ಭಕ್ತ ಬಂದರೆ ಮನೆಗೆ ಭಗವಂತನೇ ಬಂದಂತಲ್ಲವೆ. ದಿವ್ಯ ಆತಿಥ್ಯವಾಯಿತು ಕಾಂಚೀಪೂರ್ಣರಿಗೆ. ಆಮೇಲೆ ಬಂದ ಕೆಲಸವನು ಕಾಂಚೀಪೂರ್ಣರು ಹೇಳಿದರು. ಕೂರೇಶನಿಗೆ ಬಲು ದುಃಖವಾಯಿತು. 'ಏನು, ಹುಲು ಮನುಜ ನಾನು. ಪಾಪಿ ನಾನು. ದೇವರ ಕಣ್ಣಿಗೆ ಹುಳು ನಾನು ದೊಡ್ಡದಾಗಿ ಕಾಣಬಹುದೇ? ನನ್ನ ಮನೆಯ ಬಾಗಿಲು ದೇವರ ನಿದ್ದೆಗಡ್ಡಿಯೇ? ನೆಲದ ಹುಳುವಿಗೆ ನನಗೀ ಗರುವವೇ? ಗರುವ ಸಲ್ಲದು. ಗರುವ ಮೋಕ್ಷಕೆ ಮುಳ್ಳು. ವಿನಯವೇ ಮುಕುತಿಯ ಹಾದಿ' ಎಂದೆನುತ ಮನೆ ಮಠವನೆಲ್ಲ ಬಿಟ್ಟು ಶ್ರೀರಂಗದಲಿ ಯತಿರಾಜನ ಬಳಿ ಸಾರಲು ಸಂಕಲ್ಪ ಮಾಡಿದ. ಸಂಕಲ್ಪ ಮಾಡಿದುದೇ ತಡ. ಮನೆ ಮಠ ಸೊತ್ತುಗಳನ್ನೆಲ್ಲ ಗುರುಗಳಿಗೆಯೇ ದಾನಕೊಟ್ಟ. ಹೆಂಡತಿಯ ಕರೆದು ತಿಳಿವನು ಹೇಳಿ ಆಕೆಯ ಒಲವಿನ ಸೊತ್ತನೆಲ್ಲ ದಾನಮಾಡಿಸಿದ. ಕಾಲದ ಬೆಲೆಯ ಗುರುವಿನಿಂದ ತಿಳಿದಿರಲಿಲ್ಲವೇ ಕೂರೇಶ. ಗಂಡಹೆಂಡಿರಿಬ್ಬರೂ ಶ್ರೀರಂಗಕೆ

ಪಯಣವಾದರು. ಬೆಂಕಿ ಹತ್ತಿದರೆ ಉರಿಯದೆ ಬಿಟ್ಟೀತೇ? ವೈರಾಗ್ಯವು ಉರಿವ ಬೆಂಕಿಯಿದ್ದಂತೆ.

ಗಂಡ ಹೆಂಡಿರಿಬ್ಬರೂ ದಾರಿ ನಡೆದು ಸಂಜೆಗತ್ತಲಿನ ಹೊತ್ತಿಗೆ ದಟ್ಟಾದ ಕಾಡಿಗೆ ಬಂದರು. ಇಬ್ಬರೇ ಇಬ್ಬರು. ಕೂರೇಶನಿಗೆ ಕಿಂಚಿತ್ತೂ ಭಯವಾಗಲಿಲ್ಲ. ಹೆಂಡತಿ ಆಂಡಾಳಮ್ಮನಿಗೆ ಎಂದೂ ಹೀಗೆ ಪಯಣ ಮಾಡಿ ಗೊತ್ತಿರಲಿಲ್ಲ. ಕಳ್ಳರು ಮೇಲೆ ಬಂದಾರೆಂದು ಭಯವಾಯಿತು. ಗಂಡನಿಗೆ ತಿಳಿಸಿದಳು. 'ಭಯವೇಕೆ ಭಾಮೆ, ಸಿರಿಯಿದ್ದರೆ ಕಳ್ಳರ ಭಯ. ಮೀನಿಗೆ ನೀರುಹುಳು ತಿನಸು. ಕೋಳಿಗೆ ನೆಲದಹುಳು ತಿನಸು. ಸಾವಿಗೆ ಜೀವ ತಿನಸು. ಕಳ್ಳನಿಗೆ ಸಿರಿಯೇ ತಿನಸು. ಸಿರಿಯ ಬಿಟ್ಟು ಬಂದ ನಮಗೇತರ ಭಯ. ನೀನೆಲ್ಲಾ ಕೊಡಲಿಲ್ಲೇನು! ಸಂಗಡ ತಂದೇನು ಏನಾದರೂ? ತಾರದಿರಲು ಭಯವೇಕೆ?' ಕೂರೇಶನು ಗಂಭೀರನಾಗಿ ನುಡಿದ. 'ತಪ್ಪಿದನು ಮನ್ನಿಸಬೇಕು ದೊರೆಯೆ. ದಾರಿಯೊಳಗೆ ನೀರು ಕುಡಿಯಲು ಬೇಕಾದೀತೆಂದು ಈ ಬಂಗಾರದ ಬಟ್ಟಲ ತಂದಿದ್ದೆ' ಎಂದು ಬಟ್ಟಲನು ಗಂಡನಿಗಿತ್ತಳು. ಕೂರೇಶನದನು ಕಾಡಿನೊಳಗೆ ದೂರ ಎಸೆದು 'ನಡೆ ನಲ್ಲೆ, ನಿನ್ನ ಭಯವ ಕಿತ್ತು ಬಿಸುಟಿರುವೆ. ಇನ್ನು ನಡೆ' ಎಂದ. ಕೂರೇಶನು ವೀರ ವೈರಾಗ್ಯದ ಕೊನೆಯ ಕವಿತೆಯನು ಹೀಗೆ ಕಟ್ಟಿಹಾಡಿ ಮುಂದೆ ನಡೆದ.

ವರದರಾಜನಿಗಿದೆಲ್ಲ ತಿಳಿಯಿತು. ವೈರಾಗ್ಯದ ಬೆಂಕಿ ಬಲುಬೇಗ ಹತ್ತಿದುದು ವರದನಿಗೆ ಬಲು ಸಂತಸವಾಯಿತು. ಬಂಗಾರ, ವಜ್ರಗಳಲೇ ಹುಟ್ಟಿ ಬೆಳೆದ ಆಂಡಾಳಮ್ಮನು ವಿರಾಗಿಯಾದುದು ಶ್ರೀರಂಗದವರಿಗೆಲ್ಲ ಅಚ್ಚರಿ; ಕೂರೇಶನ ಕಂಡು ಯತಿಪತಿಗೆ ಹಿಡಿಸದ ಹರುಷ. ದಾಶರಥಿಗೆ ಹೇಳಲಾರದ ಹಿಗ್ಗು.

---

೬

ಆಚಾರ್ಯ ಮಹಾಪೂರ್ಣರ ದರುಶನ ಸರಿಯಾಗಿ ಆಗಲಿಲ್ಲ ಶ್ರೀರಂಗಕೆ ಬಂದಮೇಲೆ ಯತಿರಾಜನಿಗೆ. ಸದ್ಗುರುವಿಗೆ ತನ್ನ ಸತಿಯ ಕಡೆಯಿಂದ ಅಪರಾಧವಾಗಿತ್ತು. ಅದಕಾಗಿ ಆಕೆಯನು ಬಿಟ್ಟು

ಸನ್ಯಾಸಿಯಾದುದು ಅವರ ಮನಸಿಗೆ ಬಂತೋ ಇಲ್ಲವೋ—ಆ ಪ್ರಾಯಶ್ಚಿತ್ತ ಸಾಲದೋ ಏನೋ—ಎಂದು ಯತಿರಾಜನಿಗೆ ಚಿಂತೆಯಾಗಿತ್ತು. ಸದ್ಗುರುವಿನ ದರ್ಶನಮಾಡಿಕೊಂಡು ಕ್ಷಮೆ ಬೇಡಬೇಕೆಂದು ಬಗೆದರು. ಗುರುವಿನ ಮನೆಗೆ ಹೋಗಿ ಸವ್ರಭಾವದಿಂದ ನಮಸ್ಕರಿಸಿ ಆದ ತಪ್ಪಿಗೆ ಮಾಡಿದ ಪ್ರಾಯಶ್ಚಿತ್ತವನು ಹೇಳಿ ತನ್ನವರಿಂದಾದ ತಪ್ಪನು ಮನ್ನಿಸಬೇಕೆಂದು ಬೇಡಿದರು. 'ತಪ್ಪೆಲ್ಲಿಯದು? ನಿನ್ನಿಂದ ತಪ್ಪೆ?' ಎಂದು ಮಹಾಪೂರ್ಣರು ಸಮಾಧಾನ ಮಾಡಿದರು. 'ಭಗವನ್, ಯಾಮುನ ಮುನಿಗಳ ಬಳಿ ಕಲಿಯದ ಲೋಪ ನಿಮ್ಮಿಂದಲ್ಲವೆ ನನಗೆ ಪೂರ್ಣವಾಗಬೇಕು. ಯಾಮುನ ಮುನಿಗಳ, ವರದರಾಜನ ಅಪ್ಪಣೆ ಅದೇ ಅಲ್ಲವೆ' ಯತಿರಾಜ ಕೇಳಿದ. 'ಬಲು ಸಂತೋಷ. ನಾನೂ ಹಾಗೇ ಬಯಸಿದ್ದೆ. ನೋಡು. ನಮ್ಮ ಸಿದ್ಧಾಂತದ ಸವಿಯೆಲ್ಲ ದ್ವಯಾಮಂತ್ರದಲ್ಲಿ ಅಡಗಿದೆ. ದ್ವಯಾಮಂತ್ರವು ಮಂತ್ರ ರತ್ನ. ದ್ವಯಾಮಂತ್ರವು ಶುಭಕರ, ಶ್ರೀಕರ. ಅದೇ ಎಲ್ಲ ವೇದದ ಸಾರ. ಅದರ ವೀರ್ಯವೇನು ಬಲವೇನು?* ಆ ದ್ವಯಾರ್ಥ ರಹಸ್ಯವ ನಿನಗೆ ಹೇಳುವೆ. ತಿರುಮಂತ್ರವನು ನೀನು ಗೋಷ್ಠೀಪೂರ್ಣರಿಂದೇ ತಿಳಿಯಬೇಕು. ಏಕೈಕಪೂರುಷ ಕ್ರಮದಿಂದ ಆತನಿಗೊಬ್ಬನಿಗೇ ಯಾಮುನ ಮುನಿಗಳಿಂದ ತಿರುಮಂತ್ರ ರಹಸ್ಯೋಪದೇಶವಾಗಿದೆ. ಅನಧಿಕಾರಿಗಳಿಗೆ ತಿಳಿಸದೆ ಆತನದನು ಗೋಪ್ಯವಾಗಿ ಕಾಪಾಡಿರುವ. ಆತನ ಸೇವೆ ಮಾಡಿ ಆತನನೊಲಿಸು. ತಿರುಮಂತ್ರೋಪದೇಶವಾಗುವುದು' ಎಂದು ಹೇಳಿ ಯಾಮುನಾಚಾರ್ಯೋಪದಿಷ್ಟರೀತಿಯಲಿ ದ್ವಯಮಂತ್ರವನುಪದೇಶಿಸಿದರು.

ಗೋಷ್ಠೀಪೂರ್ಣರು ತಿರುಕ್ಕೊಟ್ಟಿಯೂರಿನೊಳಗೊಂದು ಹರಕು ಗುಡಿಸಿಲಿನೊಳಗಿದ್ದರು. ಅಲ್ಲಿ ಹೋಗಿ ಯತಿರಾಜನು ತಿರುಮಂತ್ರೋಪ

---

* ಅಹೋ ದ್ವಯಸ್ಯ ಮಾಹಾತ್ಮ್ಯಂ ಮಹೋವೀರ್ಯಮಹೋಬಲಂ।
ಮಂತ್ರರತ್ನಂ ಶುಭಕರಂ ವೇದಸಾರಂ ಸನಾತನಂ ॥
ಸರ್ವಪಾಪಕ್ಷಯಕರಂ ಸರ್ವಪುಣ್ಯವಿವರ್ಧನಂ।
ಶ್ರೀಕರಂ ಲೋಕವಶ್ಯಂಚ ಸದ್ಯಸ್ಸಂಸಾರತಾರಣಂ ॥

—ಕಾಶ್ಯಪ ಸಂಹಿತೆ.

ದೇಶ ಮಾಡಬೇಕೆಂದು ಬೇಡಿದ. 'ನಾನೇನ ಹೇಳಲಿ. ನನಗೇನು ಗೊತ್ತಿದೆ.' ಯತಿಶೇಖರನ ಶ್ರದ್ಧೆಯ ಪರೀಕ್ಷೆಗೆಂದು ಗೋಷ್ಠೀಪೂರ್ಣರು ಗದರಿಸಿದರು. ಯತಿರಾಜನು ಮಾತಾಡಲಿಲ್ಲ. ಬೇಡಲೂ ಇಲ್ಲ, ಕಾಡಲೂ ಇಲ್ಲ. ನಮಸ್ಕಾರ ಮಾಡಿ ಹಿಂದಿರುಗಿ ಬಂದ. ಕೆಲವು ದಿನದ ಮೇಲೆ ರಂಗೇಶನ ಬ್ರಹ್ಮೋತ್ಸವ ಸಾಗಿತು. ಗೋಷ್ಠೀಪೂರ್ಣರೂ ಬಂದರು. ಆಗ ರಂಗೇಶನ ಅಪ್ಪಣೆಯಾಯಿತು ಗೋಷ್ಠೀಪೂರ್ಣರಿಗೆ ತಿರುಮಂತ್ರ ಮಂತ್ರಾರ್ಥವ ಯತಿರಾಜನಿಗರಿಯಿಸಬೇಕೆಂದು. ಅನಧಿಕಾರಿಗಳನ್ನೊಂದು ವರುಷದ ವರೆಗೆ ಪರೀಕ್ಷೆ ಮಾಡುವಂತೆ ಭಗವದ್ವಾಕ್ಯವಿದೆಯೆಂದು ಗೋಷ್ಠೀಪೂರ್ಣರ ಸಂಕೋಚ. ಯತಿರಾಜ ನಾಸಿಯುಮುಕ್ತನವಾದನೆಂದು ಭಗವಂತ ಸಮಾಧಾನ ಮಾಡಿದ. ಆಗಲೆಂದು ಗೋಷ್ಠೀಪೂರ್ಣರು ಯತಿರಾಜನನು ತಮ್ಮ ಗುಡಿಸಿಲಿಗೆ ಬರಹೇಳಿ ಹೊರಟುಹೋದರು. ಮರುದಿನ ಯತಿರಾಜನು ಹೋಗಲು 'ಈಗ ಅವಕಾಶವಿಲ್ಲ. ನಾಳೆ ಬರಲಾರೆಯಾ' ಎಂದು ಹೇಳಿ ಹಿಂದಕೆ ಕಳಿಸಿದರು. ಹೀಗೆ ಹದಿನೆಂಟು ಸಲ ಬರಹೇಳಿ ಇದೇ ಮಾತು ಹೇಳಿ ಹಿಂದಕೆ ಕಳಿಸಿದರಂತೆ. ಒಂದು ದಿನವಾದರೂ ಯತಿರಾಜ ಬೇಸರ ಗೊಳಲಿಲ್ಲ. ಗೋಷ್ಠೀಪೂರ್ಣರು ಹೀಗೆ ಮಾಡಿದರೆಂದು ಮುನಿಸೊಂದು ಕೊಳಲಿಲ್ಲ. ದಿನವೂ ಹೋಗಿಬರುತಿದ್ದ. ಗೋಷ್ಠೀಪೂರ್ಣರಿಗೆ ಯತಿ ಶೇಖರನ ಶ್ರದ್ಧೆಯ ಪರೀಕ್ಷೆ ಮಾಡುವ ಬಯಕೆ. ಅದೃಢ ಮನದವ ನಾದರೆ ಬಾರಿಬಾರಿಗೂ ವಿಫಲವಾಗಿ ಮರಳಿಬರುತಿರಲಿಲ್ಲ. ನಿರಾಶೆ ಯಿಂದ ಮನನೊಂದರೆ ಅಂಥ ಮಿದುಮನಸಿಗೇಕೆ ಮಂತ್ರ? ದಿನದಿನಕೆ ಯತಿರಾಜನ ಗುಣವು ಹೆಚ್ಚಳದಿಂದ ನಿಚ್ಚಳವಾಗಿ ಹೊಳೆಯುತಿದೆ. ಹೀಗೆ ಅವರ ಮನಸಿನ ಯೋಚನೆ. ಇತ್ತ ಯತಿರಾಜನಿಗೆ ಕೊನೆಯ ಸಲ ಬಲು ನೋವಾಯಿತು. ಏನು ಮಾಡಿದರೆ ಗೋಷ್ಠೀಪೂರ್ಣರಿಗೆ ದಯೆ ಬಂದೀ ತೆಂದು ಚಿಂತಿಸತೊಡಗಿದ. ಹಗಲಿರುಳು ಅದೇ ಚಿಂತೆ. ಬಂದವರೊಡನೆ ಹೋದವರೊಡನೆ ಅದೇ ಮಾತು. ಒಮ್ಮೆ ಗೋಷ್ಠೀಪೂರ್ಣರ ಗೆಳೆಯರು ಕೆಲವರು ಬಂದಿದ್ದರು. 'ಪಾಪವನೆಲ್ಲ ಕಳೆದು ಮುಕುತಿಯ ಕೊಡು ವುದೇ ಭಗವಂತನ ಗುಣವಲ್ಲವೆ. ಭಗವಂತನ ಬಳಗದವರಿಗೆ—ಭಕ್ತರಿಗೆ

ಆ ಗುಣ ಬೇಡೇನು. ಯೋಗ್ಯರು ನನ್ನ ಅಯೋಗ್ಯತೆಯ ಕಳೆಯದಿರಲು ನಾನು ಯೋಗ್ಯನಾಗುವುದು ಹೇಗೆ? ಕೊಡಗೈಯು ದೊರೆ ಕೊಡದೆ ಬೇಡುವ ಭಿಕಾರಿಯ ಬಾಳು ಹೇಗೆ ಸಾಗೀತು' ಹೀಗೆ ಬಹಳ ಆರ್ತಿಯಿಂದ ಆಡಿದರವರೊಡನೆ. ಗೋಷ್ಠೀಪೂರ್ಣರಿಗಿದು ತಿಳಿಯಿತು. ಯತಿರಾಜನ ಆರ್ತಿಪರಾಕಾಷ್ಠೆಗಳ ತಿಳಿದು ಅವರ ಮನಸು ಪ್ರಸನ್ನವಾಯಿತು. ತ್ರಿದಂಡ ಯಜ್ಞೋಪವೀತಧಾರಿಯಾಗಿ ಯತಿರಾಜನೊಬ್ಬನೇ ಬರ ಬೇಕೆಂದು ಹೇಳಿಕಳಿಸಿದರು. ಯತಿರಾಜನು ಒಡನೆಯೇ ಕೂರೇಶ ದಾಶರಥಿಗಳೊಡಗೂಡಿ ತಿರುಕ್ಕೊಟ್ಟಿಯೂರಿಗೆ ಬಂದ. 'ಇದೇನು ಒಬ್ಬನೇ ಬಾರೆಂದರೆ ಇವರೊಡನೆ ಬಂದಿರುವೆ?' ಗೋಷ್ಠೀಪೂರ್ಣರು ಕೇಳಿದರು. 'ತ್ರಿದಂಡ ಯಜ್ಞೋಪವೀತಗಳೊಡನೆ ಬರಬೇಕೆಂ ದಪ್ಪಣೆಯಾಗಿಲ್ಲವೆ. ದಾಶರಥಿಯು ನನ್ನ ತ್ರಿದಂಡ. ಕೂರೇಶನಿವನೆನ್ನ ಯಜ್ಞೋಪವೀತ. ಇವರಿಬ್ಬರೂ ನನ್ನ ಬಿಟ್ಟಿರರು. ನಾನು ಇವರ ಬಿಟ್ಟಿರೆನು.' ಗೋಷ್ಠೀಪೂರ್ಣರಿಗೆ ಸಂತಸವಾಯಿತು. 'ಇವರಿಬ್ಬರ ವಿನಾ ಯಾರಿಗೂ ಈ ಮಂತ್ರ ತಿಳಿಸಬಾರದು ನೋಡು.' ಯತಿರಾಜನು ಹಾಗೇ ಶಪಥಮಾಡಿದ. ಆಗ ಏಕಾಂತದೊಳವರನು ಕೂಡಿಸಿ ತಿರುಮಂತ್ರ ಮಂತ್ರ ರಹಸ್ಯಾರ್ಥವನು ತಿಳಿಸಿದರು. 'ಎಲ್ಲ ಆಳ್ವಾರರೂ ಆಚಾರ್ಯರೂ ಆಶ್ರಯಿಸಿದ ಮಂತ್ರರಾಜವಿದು. ಮುಕುತಿ ಈ ಮಂತ್ರದ ದಾಸಿ' ಎಂದು ಅದರ ಮಹಿಮೆ ಹೊಗಳಿದರು. ಪ್ರಣಾಮ ಮಾಡಿ ತ್ರಿದಂಡ ಯಜ್ಞೋಪ ವೀತಗಳೊಡನೆ ಯತಿರಾಜನು ಶ್ರೀರಂಗಕೆ ಹೊರಟುಬಂದ.

'ನನಗೀಗ ಮುಕುತಿ ಕಟ್ಟಿಟ್ಟ ಬುತ್ತಿ. ಆದರೆ ನನಗೊಬ್ಬನಿಗೇ ಏಕೆ? ಪಾಪಿಗಳಿಗಲ್ಲದೆ ದೇವರು ಯಾರಿಗೆ? ಪಾಪಿಗಳಿಗಲ್ಲದೆ ದೇವರ ದಯೆ ಯಾರಿಗೆ ಬೇಕು? ತಿರುಮಂತ್ರವು ಪಾಪಿಗಳ ಸೊತ್ತು. ಪಾಪದ ಮೃತ್ಯು. ಅದೇಕೆ ಮಂತ್ರವನು ಹೀಗೆ ಮರ್ತ್ಯರಿಗೆ ತಿಳಿಸದೆ ಮರೆಮಾಡ ಬೇಕು. ದೇವರ ದಯೆ ಎಲ್ಲರಮೇಲೂ ಸುರಿಯಬಾರದೇಕೆ. ಆದುದಾಗಲಿ ಎಲ್ಲರಿಗೂ ತಿರುಮಂತ್ರವನು ಹೇಳಿಬಿಡುವೆ.' ಯತಿರಾಜನ ಎದೆಯೊಳಗೆ ದಯಾಗುಣವು ಉಕ್ಕಿ ತುಳುಕಿತು.

ಮರುದಿನ ತಿರುಕ್ಕೊಟ್ಟಿಯೂರಿನ ಲಕ್ಷ್ಮೀನರಸಿಂಹನ ಬ್ರಹ್ಮೋತ್ಸವ. ಎಲ್ಲೆಲ್ಲಿಂದಲೋ ಶ್ರೀವೈಷ್ಣವರು ಬಂದಿದ್ದರು. ಯತಿರಾಜನಾಗ ಆ ಗುಡಿಯ ಗೋಪುರವನೇರಿ ಎಲ್ಲರನು ಕರೆದು ಎಲ್ಲರಿಗೂ ತಿರುಮಂತ್ರವ ತಿಳಿಸಿದ. ಈ ಸುದ್ದಿ ಗೋಷ್ಠೀಪೂರ್ಣರಿಗೆ ತಿಳಿಯಿತು. ಯತಿರಾಜನ ಕರೆಯಿಸಿ ಸಿಟ್ಟಿನಿಂದ 'ಮಾಡಿದ ಶಪಥವ ಮರೆತೆಯ. ಬೀದಿಯ ಜನರಿಗೆಲ್ಲ ಹಂಚಲು ಸಕ್ಕರೆಯೆಂದು ಕೊಟ್ಟೆನೇ ನಿನಗೆ ಮಂತ್ರರಾಜವನು ? ಗುರುವಾಕ್ಯವ ಮೀರಿದೆಯ ' ಎಂದು ದಂಡಿಸಿದರು. ಯತಿರಾಜ ನಮ್ರತೆಯಿಂದ ಅಂದ—' ಅಪರಾಧವಾಯಿತು. ನಿಮ್ಮ ಕೀರುತಿ ಬೆಳೆಯಲೆಂದೇ ಹೀಗೆ ಮಾಡಿದೆನಲ್ಲದೆ ಬೇರೆ ಅಲ್ಲ.' 'ಆ ಅಪರಾಧದ ಫಲ ಬಲ್ಲೆಯಾ ?'—'ನರಕ' 'ತಿಳಿದೂ ತಿಳಿದೂ ತಪ್ಪುಮಾಡಿದೆಯೇಕೆ ?' ಯತಿಶೇಖರನಿಗೆ ಕಣ್ಣಲಿ ನೀರು ತೊರೆಯಾಗಿ ಹರಿದುಹೋಯಿತು. 'ಭಗವನ್ ನರಕ ನನ್ನ ಗತಿಯೆಂದು ಬಲ್ಲೆ. ಆದರೆ ಒಬ್ಬನ ನರಕ ಹೆಚ್ಚೋ ಎಲ್ಲರ ನರಕ ಹೆಚ್ಚೋ ? ನಾನೊಬ್ಬ ನರಕಕೆ ಹೋಗಿ ಎಲ್ಲರೂ ಮುಕುತಿ ಪಡೆದರೆ ನಾನು ನರಕವನೇಕೆ ಹೊಗಬಾರದು ? ತಮ್ಮ ಅನುಗ್ರಹಾತಿರೇಕವೇ ನನ್ನಿಂದ ಈ ತಪ್ಪು ಮಾಡಿಸಿತು. ಮನ್ನಿಸಬೇಕು' ಎಂದು ಅಳುತಳುತ ಹೇಳಿದರು. ಗೋಷ್ಠೀಪೂರ್ಣರಿಗೆ ದಿಗ್ಭ್ರಾಂತಿಯಾಯಿತು. ಯತಿರಾಜನ ಪರಮೌದಾರ್ಯ ಬುದ್ಧಿ, ಸ್ವಾರ್ಥತ್ಯಾಗದ ಪರಾಕಾಷ್ಠೆ, ದಯಾಳುತನಗಳು ಅವರ ಮನಸು ಕರಗಿಸಿದವು. 'ನನ್ನ ಕೊಳಕು ಎದೆಯೊಳಗೇಕೆ ಈ ದಯಾಳುತನ ಹರಿಯಲಿಲ್ಲ. ಹುಳಿತ ಹೃದಯವಿದು. ಕುರುಡು ಜೀವವಿದು. ಯತಿರಾಜ, ನೀನು ಮರ್ತ್ಯ ಮಾನವನಲ್ಲ. ಅವತಾರಿ ಶೇಷನೇ ಸರಿ. ಅಲ್ಲದಿರಲು ಈ ಪರಹಿತದ ಪರಾಕಾಷ್ಠೆ ಹೇಗೆ ಬಂದೀತು ? ನಿಜ. ನೀನು ಅವತಾರಿ ಶೇಷನೇ ನಿಜ.' ಗೋಷ್ಠೀಪೂರ್ಣರ ಹೃದಯದ ಎಲ್ಲ ರಸವು ಬಲು ದಿನದಿಂದ ಇದ್ದ ಕೆರೆಯೇರಿ ಒಡೆದಂತಾಗಿ ಮನೋಹರ ಪ್ರವಾಹವಾಗಿ ಹರಿಯಿತು. ''ಮಗು ಇಂದಿನಿಂದ ನಿನಗೆ 'ಎಂಬೆರುಮಾನಾರ್' ಎಂದು—ನನ್ನ ಸ್ವಾಮಿ—ಹೆಸರಾಗಲಿ. ನೀನು ನನ್ನೊಡೆಯನೇ ನಿಜ. ಇನ್ನು ವಿಶಿಷ್ಟಾದ್ವೈತವು ರಾಮಾನುಜ ಸಿದ್ಧಾಂತವೆನಿಸಲಿ. ತಿರುಮಂತ್ರವನೇ ಏಕೆ ಎಲ್ಲವನೂ

ಜಗತ್ತಿಗೆ ಸಾರು. ಇನ್ನುಳಿದ ರಹಸ್ಯಗಳನೂ ನಿನಗೆ ಹೇಳುವೆ.'' ಗೋಷ್ಠೀಪೂರ್ಣರಿಗೆ ಯತಿರಾಜನ ಮೇಲೆ ಕೊನೆಗಾಣದ ಒಲವು ಮೊಳೆಯಿತು.

ಕೆಲವು ದಿನವಾದಮೇಲೆ ಯತಿರಾಜನನು ಗೋಷ್ಠೀಪೂರ್ಣರು ಕರೆಸಿದರು. ಏಕಾಂತದೊಳು ಕೂಡಿಸಿ ಯತಿಪತಿಯಿಂದ ಆಚಾರ್ಯ ಪೂಜೆ ಮಾಡಿಸಿ ಹೇಳಿದರು—'ಅಧ್ಯಾತ್ಮ ಶಾಸ್ತ್ರದ ಚರಮಶ್ಲೋಕವಿದು. ಅರ್ಜುನನಂಥ ವೀರ ಭಕ್ತನಿಗೆ ಭಗವಾನನು ಹೇಳಿದ ಗುಟ್ಟು—

ಸರ್ವ ಧರ್ಮಾನ್ ಪರಿತ್ಯಜ್ಯ ಮಾಮೇಕಂ ಶರಣಂ ವ್ರಜ।
ಅಹಂತ್ವಾಂ ಸರ್ವ ಪಾಪೇಭ್ಯೋ ಮೋಕ್ಷಯಿಷ್ಯಾಮಿಮಾಶುಚಃ ॥

ಇದು ಪರಮಗುಹ್ಯ. ಯಾರಿಗೂ ತಿಳಿಸದಿರು. ನಾಸ್ತಿಕರಿಗೆ, ಭಗವದ್ವಿರೋಧಿಗಳಿಗೆ ಹೇಳದಿರು.'* 'ಕೂರೇಶನಂಥ ಭಕ್ತಪುಂಗವನಿಗೂ ಹೇಳಬಾರದೆ?' 'ಯಾರಿಗೇ ಆಗಲಿ ಒಂದು ವರುಷ ಪರೀಕ್ಷೆ.' ಯತೀಂದ್ರನು ಗುರುಗಳಿಗೆ ಪ್ರಣಾಮ ಮಾಡಿದ. ಕೋಟಿ ಕೊತ್ತಳ ಗೆದ್ದ ಆನಂದ ಯತಿರಾಜನಿಗೆ. ವೈಕುಂಠ ರಾಜ್ಯವ ಸೂರೆಗೊಳಲಿಲ್ಲನೆ ಯತಿರಾಜ.

ಕೂರೇಶನಿಗೀ ಚರಮಸತ್ಯವ ತಿಳಿಯಲಾಸೆ ಬಹಳ. ಅನುಕೂಲ ಪ್ರಸಂಗ ಬಂದಾಗ ನಮಸ್ಕಾರ ಮಾಡಿ ಚರಮಶ್ಲೋಕವ ಉಪದೇಶಿಸಬೇಕೆಂದು ಬೇಡಿದ. 'ಕೂರೇಶ, ಒಂದು ವರುಷ ಶುಶ್ರೂಷೆ ಮಾಡಿದಲ್ಲದೆ ಹೇಗಾದೀತು?' ಎಂದು ಯತಿರಾಜನು ನುಡಿದ ಗೋಷ್ಠೀಪೂರ್ಣರ ಆಣತಿಯಂತೆ. 'ಭಗವನ್, ವರುಷದವರೆಗೀ ಮೈ ಇರಬಲ್ಲುದೆಂದು ಹೇಳುವವರಾರು? ಗಳಿಗೆಯ ಮೋಡವೀ ಬಾಳು. ಗುರು ಸನ್ನಿಧಿಯಲಿ ಒಂದು ತಿಂಗಳು ಉಪವಾಸ ಮಾಡಿದರೆ ವರುಷ ಶುಶ್ರೂಷೆ ಮಾಡಿದಂತಾಗದೆ? ದಯೆದೋರಬೇಕು' ಎಂದು ಮರುಗಳಿಗೆಯೇ ಕೂರೇಶ ಮಾಸೋಪವಾಸಕೆ ಮೊದಲಿಟ್ಟ. ಕಾಲದ ಬೆಲೆ ಕೂರೇಶನಿಗೆ

---

* ಇದಂ ತೇ ನಾ ತಪಸ್ಕಾಯ ನಾಭಕ್ತಾಯ ಕದಾಚನ।
ನಚಾ ಶುಶ್ರೂಷವೇ ವಾಚ್ಯಂ ನಚ ಮಾಂ ಯೋಽಭ್ಯಸೂಯತಿ ॥

—ಗೀತಾ, ೧೮ ಅಧ್ಯಾಯ, ೬೭.

ಗೊತ್ತು. ವ್ರತ ಮುಗಿದ ಮೇಲೆ ಯತಿರಾಜನು ಕೂರೇಶನಿಗೆ ಚರಮಾರ್ಥೋಪದೇಶಮಾಡಿದ. ಇದೆಲ್ಲ ದಾಶರಥಿಗೆ ತಿಳಿಯದೆ ಇರಬಲ್ಲದೆ? ದಾಶರಥಿಯೂ ಚರಮಸತ್ಯವ ಬೇಡಿದ. 'ಮಗು, ಕೂರೇಶನಿಗೆ ಮಾತ್ರ ಕೊಡಲು ನನ್ನ ಅಧಿಕಾರ. ನೀನು ಸದ್ಗುರು ಗೋಷ್ಠೀಪೂರ್ಣರಿಂದೇ ಅಪ್ಪಣೆ ಪಡೆಯಬೇಕು' ಎಂದ ಯತಿಪತಿ. ದಾಶರಥಿ ಒಡನೆಯೇ ತಿರುಕ್ಕೊಟ್ಟಿಯೂರಿಗೆ ಹೋಗಿ ಸದ್ಗುರುವಿನ ಶರಣು ಹೋದ. ಗೋಷ್ಠೀಪೂರ್ಣರು ಮಾತೇ ಆಡಲಿಲ್ಲ. ದಾಶರಥಿ ಕಬ್ಬಿಣದ ಮನಸಿನವನು. ಬೇಡುವುದು ಬಿಡಲಿಲ್ಲ. ಕಾಡಿ ಬೇಡಿದ. ಗೋಷ್ಠೀಪೂರ್ಣರು ಅವನನು ಕಾಡಿಸಿದರು ಮಾತೇ ಆಡದೆ. ಇಬ್ಬರ ಮನಸೂ ಕಬ್ಬಿಣ. ಹೀಗೆ ಆರು ತಿಂಗಳಾಯಿತು. ಈ ಆರುತಿಂಗಳ ತಿಕ್ಕಾಟದೊಳಗೆ ದಾಶರಥಿಯ ಎಲ್ಲ ಅಭಿಮಾನವೂ ಪುಡಿಯಾಯಿತು. ಮರಳಿ ಬೇಡಿದ. ಈ ಭಗೀರಥನ ಮುಂದೆ ಗೋಷ್ಠೀಪೂರ್ಣರು ಕರಗಿಹೋದರು. 'ದಾಶರಥಿ, ನಿನ್ನ ವಿದ್ಯಾ ಧನಾಭಿಜಾತ್ಯ ಮದಗಳು ಬೆಂದುಹೋಗಲಿ. ಹೋಗು. ಯತಿರಾಜ ನಿನಗೆ ದಯೆದೋರುವನು'—ಎಂದು ಆಶೀರ್ವಾದ ಮಾಡಿ ಕಳಿಸಿದರು. ದಾಶರಥಿ ಧೈರ್ಯಗೆಡಲಿಲ್ಲ. ಶ್ರೀರಂಗಕ್ಕೆ ಬಂದು ನಡೆದುದನೆಲ್ಲ ಯತಿಪತಿಗೆ ತಿಳಿಸಿದ. ದಾಶರಥಿಗೀಗ ಎಂಥ ಗರುವವೂ ಇಲ್ಲ. ಮೊದಲೇ ನಿಗರ್ವಿ. ಮೇಲೆ ಆರು ತಿಂಗಳು ಕೆತ್ತನೆಯ ಕೆಲಸ. ದಾಶರಥಿ ವಿನಯದ ವಿಗ್ರಹವಾಗಿದ್ದ. ಯತಿಪತಿಗೆ ಬಲು ಹರುಷವಾಯಿತು. ಅವನಿಗೂ ಚರಮಾರ್ಥೋಪದೇಶಮಾಡಿದ. ಈಗ ಕೂರೇಶ ದಾಶರಥಿಗಳು ನಿಜವಾಗಿಯೂ ತನ್ನ ತ್ರಿದಂಡ ಯಜ್ಞೋಪವೀತಗಳಾದರೆಂದು ಮನಸಿನೊಳಗೆ ಹಿಗ್ಗಿದ.




2707—27. ಬಂಗಳೂರು ಪ್ರೆಸ್, ಮೈಸೂರು ರೋಡು, ಬೆಂಗಳೂರು ಸಿಟಿ.

# 59 – वेदार्थसंग्रहः

Beginning:

शुभमस्तु । निर्विघ्नमस्तु । हरिः ओम् ।

अशेषचिदचिद्वस्तुशेषिणे शेषशायिने ।
निर्मलानन्तकल्याणनिधये विष्णवे नमः ।।

परं ब्रह्मैवाज्ञं भ्रमपरिगतं संसरति तत्
परोपाध्यालीढं विवशमशुभस्यास्पदमिति ।